ಬೆಲೆ: ಎರಡು ಆಣೆ

ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ
ಕಳಿಸಿಕೊಂಡಲ್ಲಿ ೫ ಆಣೆ
ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
WEEKLY
HUBLI
*
APRIL 22
1946

ಸಂಪಾದಕರು :
ಹ. ರಾ. ಪುರೋಹಿತ, ಎಂ. ಎ. ]

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

[ Editor : H. R. Purohit, M. A.

ಸಂಪುಟ ೧೮ ] 卐 ಹುಬ್ಬಳ್ಳಿ ಸೋಮವಾರ ತಾರೀಖು ೨೨ — ೪ — ೧೯೪೬ 卐 [ ಸಂಚಿಕೆ ೩

# ಹಿಂದುಸ್ತಾನ ಸ್ವತಂತ್ರ ಮತ್ತು ಅಖಂಡವುಳಿಯಬೇಕು

## ಇಬ್ಭಾಗವಾಗುವದರಿಂದ ನೂರಾರು ಸಮಸ್ಯೆ ಹುಟ್ಟುವವು

## ಹಿಂದುಸ್ತಾನವು ಬಲಗುಂದಿ ಪರರಾಷ್ಟ್ರಗಳ ರಂಗಸ್ಥಳವಾಗುವದು

### ಮುಸ್ಲಿಂ ಲೀಗಿನವರು ಹಟಮಾರಿತನ ಬಿಡುವರೊ ?

— (ಲೇ : ರಾಜಕಾರಣಿ)

ಬ್ರಿಟಿಶ ಮಂತ್ರಿತ್ರಯರು ಹಿಂದುಸ್ತಾನದ ಸಮಸ್ಯೆಯನ್ನು ಬಿಡಿಸಲು ಇಲ್ಲಿಗೆ ಬಂದು ಮೂರು ವಾರಗಳಾಗಿ ಹೋದುವು. ಈ ಅವಧಿಯಲ್ಲಿ ಅವರು ಇಲ್ಲಿನ ಅಧಿಕಾರಿಗಳ ವಿವಿಧ ರಾಜಕೀಯ ಪಕ್ಷಪಂಗಡಗಳ ಪ್ರಮುಖರ ಭೆಟ್ಟಿ [illegible] ತೆಗೆದುಕೊಂಡಿರುವರು. ತಮ್ಮ ಅಭಿಪ್ರಾಯವನ್ನೇನೂ ಬಹಿರಂಗ ಪಡಿಸದ ಅವರ ಹೇಳಿಕೆಗಳನ್ನೆಲ್ಲ ತಿಳಿದುಕೊಂಡಿರುವರು. ಹಿಂದೀ ಸಮಸ್ಯೆಯನ್ನು ಬಗೆಹರಿಸದೆ ಮರಳಬಾರದೆಂದು ಬ್ರಿಟಿಶ್ ಸರಕಾರದವರು ಮಂತ್ರಿತ್ರಯರಿಗೆ ವಿಧಿಸಿರುವರೆಂದೂ ಅವರಾದರೂ ಹಾಗೆಯೆ ನಿರಾಶರಾಗಿ ಮರಳಿ ಹೋಗುವುದಿಲ್ಲೆಂದೂ ಹೇಳಲಾಗುತ್ತದೆ. ಅಂತೆಯೆ ಹಿಂದುಸ್ತಾನದ ಈ ಪ್ರಶ್ನೆಗೆ ಇಷ್ಟೊಂದು ಮಹತ್ವ ಬಂದಿದೆ. ಈ ಚರ್ಚೆಯ ಮೊದಲನೆ ಅಂಕು ಕೊನೆಗಂಡಿದ್ದು ಈಸ್ಟರ ಹಬ್ಬದ ನಂತರ ಎರಡನೆ ಅಂಕು ಪ್ರಾರಂಭವಾಗಲಿದೆ. ಪ್ರಾಸ್ತಾವಿಕ ಚರ್ಚೆಯು ನಂತರ ತಾ. ೧೬ ಮತ್ತು ೧೭ ಕ್ಕೆ ಅವರು ಕಾಂಗ್ರೆಸ್ ಅಧ್ಯಕ್ಷರಾದ ಮೌಲಾನಾ ಅಬುಲ್ ಕಲಂ ಅಜಾದರನ್ನು ಮತ್ತು ಲೀಗ ಅಧ್ಯಕ್ಷರಾದ ಬ್ಯಾ. ಜಿನ್ನಾರನ್ನು ಮತ್ತೆ ಕಂಡು ಮಾತುಕತೆಯಾಡಿದರು. ಈ ರೀತಿ ಅವರು ಕಾಂಗ್ರೆಸ್ ಲೀಗ ಧುರೀಣರನ್ನು ಭೆಟ್ಟಿಯಾಗಿ ಕಾಶ್ಮೀರಕ್ಕೆ ಮರಳಿದ ನಂತರ ಸರದಾರ ವಲ್ಲಭಭಾಯಿ ಪಟೇಲ, ನೆಹರು ಬ್ಯಾ. ಜಿನ್ನಾ ಮತ್ತು ಲಿಯಾಕತ ಅಲ್ಲಿಖಾನರ ದುಂಡುಮೇಜಿನ ಪರಿಷತ್ತನ್ನು ಕರೆಯಲಾಗುವದೆಂದೂ ಅದಕ್ಕೆ ವಾಯಿಸರಾಯರೆ ಅಧ್ಯಕ್ಷರಾಗುವರೆಂದೂ ಹೇಳಲಾಗುತ್ತದೆ. ತಪ್ಪುತಿಳಿವಳಿಕೆ, ಭಿನ್ನಾಭಿಪ್ರಾಯ ಮೊದಲಾದವುಗಳನ್ನೆಲ್ಲ ಹೋಗಲಾಡಿಸಿ ಕಾಂಗ್ರೆಸ್ ಮತ್ತು ಲೀಗಗಳಲ್ಲಿ ಒಡಂಬಡಿಕೆ ಮಾಡಿಬಿಟ್ಟರೆ ಹಿಂದೀ ಸಮಸ್ಯೆ ಸರಾಗವಾಗಿ ಬಗೆಹರಿಯಬಹುದು. ಆದರೆ ಬ್ರಿಟಿಶ್ ಸರಕಾರದವರು ಮಾತ್ರ ಅಧಿಕಾರ ಬಿಟ್ಟುಗೊಡಲು ಸಿದ್ಧರಿರಬೇಕು. ಸದ್ಯದ ವಾತಾವರಣವನ್ನು ನೋಡಿದರೆ ಬ್ರಿಟಿಶರು ಅಧಿಕಾರ ಬಿಟ್ಟುಗೊಡಲು ಸಿದ್ಧರಾಗಿರುವರೆಂದು ತೋರುತ್ತದೆ.

### ಕಾಂಗ್ರೆಸ್ಸಿನ ಧೋರಣ

ಹಿಂದುಸ್ತಾನದ ಸಮಸ್ಯೆ ಬಗ್ಗೆ ಕಾಂಗ್ರೆಸ್ಸಿನ ಧೋರಣ ಸ್ಪಷ್ಟವಾಗಿದೆ. ಹಿಂದುಸ್ತಾನ ಅಖಂಡವಾಗಿರಬೇಕು. ಸ್ವಾತಂತ್ರ್ಯವನ್ನು ಪಡೆಯಬೇಕು ಅಲ್ಪಸಂಖ್ಯಾಕರಿಗೆ ಎಲ್ಲ ಬಗೆಯ ಸೌಕರ್ಯಗಳನ್ನು ಕೊಡಲಾಗುವದು. ಕೇಂದ್ರ ಸರಕಾರವು ಅತ್ಯಂತ ಬಲಿಷ್ಠವಾಗಿದ್ದು ಸಂಯುಕ್ತವಾಗಿರಬೇಕು. ಪ್ರಾಂತಿಕ ಸ್ವಾಯತ್ತತೆಯನ್ನು ಕೊಡಲಾಗುವದು. ಆದರೆ ಪರರಾಷ್ಟ್ರ ಧೋರಣ, ಸಂರಕ್ಷಣ, ವಾಹನ ಸೌಕರ್ಯ ಮೊದಲಾದ ಮಹತ್ವದ ವಿಷಯಗಳನ್ನು ಕೇಂದ್ರ ಸರಕಾರವೇ ನಿಯಂತ್ರಿಸತಕ್ಕದ್ದು. ಲೀಗಿನವರ ಬೇಡಿಕೆಯನ್ನು ಎಷ್ಟರ ಮಟ್ಟಿಗೆ ಮನ್ನಿಸಬಹುದೆಂಬ ಬಗ್ಗೆಯೂ ಕಾಂಗ್ರೆಸ ಕಾರ್ಯಕಾರಿ ಮಂಡಳದವರು ಚರ್ಚಿಸಿರುವರು. ಬಹುಸಂಖ್ಯಾಕ ಮುಸಲ್ಮಾನರಿರುವ ಪ್ರದೇಶಗಳಲ್ಲಿ ಅವರದೇ ಸ್ವಾಯತ್ತ ಸರಕಾರಕ್ಕೆ ಅವಕಾಶ ಸಿಕ್ಕುವಂತೆ ಪ್ರಾಂತಗಳನ್ನು ಪುನರ್ರಚಿಸಲು ಕಾಂಗ್ರೆಸ್ಸು ಒಪ್ಪುವದು. ಆದರೆ ರಾಜ್ಯಘಟನೆಯನ್ನು ಸಿದ್ಧಪಡಿಸಲು ಒಂದೇ ಘಟನಾಸಮಿತಿ ಇರತಕ್ಕದ್ದು ಮುಸ್ಲಿಂ ಲೀಗಿನವರಿಗೆ ಮಾತ್ರವೇ ಅಲ್ಲದೆ ಹಿಂದುಸ್ತಾನದಲ್ಲಿರುವ ಎಲ್ಲ ಅಲ್ಪಸಂಖ್ಯಾಕರಿಗೂ ಕಾಂಗ್ರೆಸ್ಸು ಆಶ್ವಾಸನ ಕೊಟ್ಟಿದೆ. ಕಾಂಗ್ರೆಸ್ಸಿನ ಮೂಲಭೂತ ಹಕ್ಕಿನ ಗೊತ್ತುವಳಿಯಲ್ಲಿ ಇದೆಲ್ಲವನ್ನೂ ಸ್ಪಷ್ಟಪಡಿಸಲಾಗಿದೆ. ಅಲ್ಲದೆ ಕಾಂಗ್ರೆಸ ಅಧ್ಯಕ್ಷರು ಕಾಂಗ್ರೆಸ ವರಿಷ್ಠರು ಅನೇಕ ಸಲ ಈ ಮಾತನ್ನು ಸ್ಪಷ್ಟಪಡಿಸಿರುವರು.

### ಮುಸ್ಲಿಂ ಲೀಗಿನ ಹಟ

ಆದರೆ ಮುಸ್ಲಿಂ ಲೀಗು ಮಾತ್ರ ತನ್ನ ಹಟಮಾರಿತನವನ್ನು ಇನ್ನೂ ಬಿಟ್ಟುಗೊಟ್ಟಿಲ್ಲ. ವಿಘಾತಕವಾದ ಪಾಕಿಸ್ತಾನವಿಲ್ಲದೆ ಯಾವ ಘಟನೆಗೂ ಅವರು ಒಪ್ಪುವದಿಲ್ಲೆಂದು ಹಿಂದುಸ್ತಾನವನ್ನು ಪಾಕಿಸ್ತಾನ ಮತ್ತು ಹಿಂದುಸ್ತಾನವೆಂದು ಒಡೆಯಬೇಕೆಂದೂ ಇದಕ್ಕಾಗಿ ಹಿಂದುಸ್ತಾನದ ಘಟನೆ ಸಿದ್ಧಪಡಿಸಲು ಒಂದೇ ಘಟನಾ ಸಮಿತಿಯಿರದೆ ಎರಡು ಘಟನಾಸಮಿತಿಗಳಿರಬೇಕೆಂದೂ ಕೇಳುತ್ತಿರುವರು. ಒತ್ತಾಯದಿಂದ ಅಖಂಡ ಹಿಂದುಸ್ತಾನವನ್ನು ತಮ್ಮ ಮೇಲೆ ಹೇರಿದ್ದಾದರೆ ಎಂದೂ ಸಹಿಸೆವೆಂದೂ ಬೆದರಿಕೆ ಕೊಟ್ಟಿದ್ದಾರೆ. ಶಾಸನ ಸಭೆಗಳಿಗೆ ಆರಿಸಿಬಂದ ಸದಸ್ಯರ ಪರಿಷತ್ತು ಮೊನ್ನೆ ಮೊನ್ನೆ ಬ್ಯಾ. ಜಿನ್ನಾ ಸಾಹೇಬರ ಅಧ್ಯಕ್ಷತೆಯಲ್ಲಿ ದಿಲ್ಲಿಯಲ್ಲಿ ನಡೆಯಿತು. ಆ ಕಾಲಕ್ಕೆ ಲೀಗದ ಧುರೀಣರು ಮಾಡಿದ ಭಾಷಣಗಳನ್ನು ನೋಡಿದರೆ ಹಿಂದುಸ್ತಾನದಲ್ಲಿ ಅಶಾಂತಿಯನ್ನುಂಟು ಮಾಡಿಯೂ ಪಾಕಿಸ್ತಾನ ಸಂಪಾದಿಸಿಯೇ ತೀರುವೆವೆಂದು ಅವರು ಪಣತೊಟ್ಟಿದ್ದು ಕಂಡುಬರುವದು. ಆ ರೀತಿ ಅವರು ಆಣೆಯನ್ನೂ ತೆಗೆದುಕೊಂಡರಂತೆ. ಎಂಟು ನೂರು ವರುಷಗಳವರೆಗೆ ಯಾವ ಹಿಂದುಗಳ ಮೇಲೆ ರಾಜ್ಯವಾಳಿರುವೆವೊ ಅಂಥ ಹಿಂದುಗಳ ಆಡಳಿತೆಯಲ್ಲಿ ತಾವೆಂದೂ ಉಳಿಯಲಾರೆವೆಂದೂ ಒತ್ತಾಯದಿಂದ ಯಾರಾದರೂ ಅದನ್ನು ಹೇರಿದ್ದಾದರೆ ಕತ್ತಿಯನ್ನು ಒರೆಯಿಂದ ಹಿರಿಯಲು ಸಿದ್ಧರಿರುವದಾಗಿಯೂ ನುಡಿದರು. ಗಂಡಸರಷ್ಟೆ ಅಲ್ಲ, ಹೆಣ್ಣುಮಕ್ಕಳು ಕೂಡ ವಚನ ತೆಗೆದುಕೊಂಡರು.

### ವಿಘಾತಕ ಧೋರಣ

ಮುಸ್ಲಿಂ ಲೀಗಿನ ಈ ಧೋರಣವೆಷ್ಟೊಂದು ವಿಘಾತಕ ಮತ್ತು ಹಿಂದುಸ್ತಾನದ ನಾಶಕ್ಕೆ ಕಾರಣವಾಗಿದೆಂಬವನ್ನು ಬೇರೆ ಹೇಳಬೇಕಿಲ್ಲ. ಮುಸಲ್ಮಾನರು ತಮ್ಮ ಪಾಶವೀಬಲದ ಮೇಲೆ ಹೆಚ್ಚು ವಿಶ್ವಾಸವಿಟ್ಟುಕೊಂಡಿರುವದರಿಂದ ಈ ಬಗೆಯ ಹಿಂಸಾತ್ಮಕ ವಿಚಾರಗಳು ಅವರ ತಲೆಯಲ್ಲಿ ಸುಳಿದಾಡುವುವು. ಹಿಂದುಸ್ತಾನದಲ್ಲಿ ಒಂದೇ ಕೇಂದ್ರ ಸರಕಾರ ಸ್ಥಾಪಿತವಾದರೆ ಪ್ರಾಂತಗಳಲ್ಲಿ ಸ್ವಾಯತ್ತ ಸರಕಾರಗಳು ಏರ್ಪಟ್ಟು ಅವೆಲ್ಲ ಈ ಕೇಂದ್ರ ಸರಕಾರಕ್ಕೆ ಕೆಲ ವಿಷಯಗಳಲ್ಲಿ ಅಧೀನವಾಗಿ ಆಡಳಿತೆ ಸಾಗಿದ್ದಾದರೆ ಅದೆಂತು ಹಿಂದುಗಳ ಪ್ರಸ್ಥ ಬೆಳೆಯುವುದೊ ತಿಳಿಯದು. ಮುಸಲ್ಮಾನರಿಗೆ ಸಮ ಪ್ರಾತಿನಿಧ್ಯ ಕೊಡಲು ಕಾಂಗ್ರೆಸು ಒಪ್ಪಿದೆ. ಅಲ್ಲದೆ ಬೇರೆ ಅಲ್ಪಸಂಖ್ಯಾಕರ ಹಕ್ಕುಬಾಧ್ಯತೆಗಳು ರಕ್ಷಿಸಲ್ಪಡುವದಾಗಿ ಆಶ್ವಾಸನ ಕೊಟ್ಟಿದೆ. ಹೀಗಿರುವಾಗ ಲೀಗು ಬೆದರುವದೇಕೊ ? ಎಂಟು ನೂರು ವರ್ಷಗಳ ವರೆಗೆ ಹಿಂದುಸ್ತಾನವನ್ನಾಳಿದ ಹೆಮ್ಮೆಯನ್ನು ಅವರು ಬಿಟ್ಟುಗೊಡತಕ್ಕದ್ದು. ಆಯಾ ಕಾಲಮಾನ ಪರಿಸ್ಥಿತಿಯನ್ನನುಸರಿಸಿ ಆಯಾ ಜಾತಿಯವರು ಪಕ್ಷಪಂಗಡಗಳವರು ತಮ್ಮ ಧೋರಣವನ್ನು ಮಾರ್ಪಡಿಸಿಕೊಳ್ಳಬೇಕು. ಹಿಂದಿನಂತೆ ಈಗಲೂ ಧರ್ಮಾಂತರದ, ಇಲ್ಲವೆ ಪರ ಜಾತಿಯವರನ್ನು ಛಲಿಸುವ ಧೋರಣವಿಟ್ಟುಕೊಂಡರೆ ಎಂದಿಗೂ ನಡೆಯದು. ಜಾತಿಸಮನ್ವಯ, ತತ್ವಸಮನ್ವಯವೆ ಇಂದಿನ ಯುಗಧರ್ಮವು. ಈ ಮಾತನ್ನು ಆಯಾ ಜಾತಿಯವರು ಒಪ್ಪಲಿಕ್ಕೆ ಬೇಕು. ಇಲ್ಲವಾದರೆ ಜಾತೀಯ ತಿಕ್ಕಾಟವುಂಟಾಗಿ ಎಲ್ಲೆಲ್ಲಿಯೂ ಅಶಾಂತಿ ಉಂಟಾಗಬಹುದು.

### ಬಲ ಕುಂದುವದು

ಹಿಂದುಸ್ತಾನವನ್ನು ಒಡೆದದ್ದಾದರೆ ಅದರ ಬಲ ಕುಂದಿ ಶಕ್ತಿ ಹ್ರಾಸವಾಗಿ ಪರಕೀಯರ ದಾಳಿಗೆ ಅದು ಆಹುತಿಯಾಗುವುದೆಂಬುದು ಭಾರತೀಯರದಷ್ಟೇ ಅಲ್ಲದೆ ಬ್ರಿಟನ್ ಅಮೇರಿಕೆ ಮೊದಲಾದ ಪ್ರಮುಖ ರಾಷ್ಟ್ರಗಳಲ್ಲಿಯ ಸಮಂಜಸ ಪ್ರಜಾಮುಖಂಡರ ಅಭಿಪ್ರಾಯವೂ ಆಗಿದೆ. ಪ್ರಸಿದ್ಧ ಅಮೇರಿಕನ್ ಲೇಖಕರಾದ ಲುಯೀ ಫಿಶರರು ಹಿಂದುಸ್ತಾನವು ಅಖಂಡ ಮತ್ತು ಸ್ವತಂತ್ರವಾಗಿರತಕ್ಕದ್ದೆಂದು ಸ್ಪಷ್ಟವಾಗಿ ಹೇಳಿರುವರು. ಅಂತರ್‌ರಾಷ್ಟ್ರೀಯ ವಿಷಾದಮಯ ಪರಿಸ್ಥಿತಿಯಲ್ಲಿ ಜಗತ್ತಿನಲ್ಲೆಲ್ಲ ಆಹಾರಾಭಾವದ ಗಂಡಾಂತರವಿರುವಾಗ ಬ್ರಿಟಿಶ್ ಮುಖ್ಯ ಮಂತ್ರಿಗಳಾದ ಆ್ಯಟ್ಲಿಯವರು ಹಿಂದುಸ್ತಾನಕ್ಕೆ ಸ್ವಾತಂತ್ರ್ಯದ ಕೊಡುಗೆ ಮುಂದೆ ಮಾಡಿದ್ದು ಪ್ರಕಾಶದ ಒಂದು ಕಿರಣವಾಗಿದೆಂದೂ ಅವರು ಅಭಿಪ್ರಾಯಪಟ್ಟಿರುವರು. ಸರ್ ಸ್ಟಾಫರ್ಡ ಕ್ರಿಪ್ಸರು ಮತ್ತೊಂದು ಪರಾಜಯ ಹೊಂದುವರೆಂದು ನಾನೆಣಿಸುವುದಿಲ್ಲ. ಚರ್ಚಿಲ್ ಸರಕಾರದವರು ೧೯೪೨ ರಲ್ಲಿ ತಮ್ಮ ಕಡೆಗೆ ಕೊಟ್ಟಿದ್ದ ಕೊಡುಗೆಗಿಂತ ಇದು ಹೆಚ್ಚು ಯೋಗ್ಯವಾಗಿದೆಂದು ಕ್ರಿಪ್ಸರ ಮನವರಿಕೆಯಾಗಿರಲು ಸಾಕೆಂದು ನನ್ನ ನಂಬಿಗೆ. ಕ್ರಿಪ್ಸರು ಹಿಂದೀ ಮುಖಂಡರೊಡನೆ ವಿಚಾರವಿನಿಮಯ ನಡೆಸಿದಾಗ, ಒಪ್ಪಂದದ ಸಮಯ ಸಮೀಪಿಸಿದಾಗ ಬ್ರಿಟಿಶ್ ಟೋರಿ ಸರಕಾರದವರು ತಮ್ಮ ಕೊಡುಗೆಯನ್ನು ಹಿಂತೆಗೆದುಕೊಂಡು ಹಿಂದಿನಿಂದ ಒಳಿತಾಗಿ ಹೊಡಿದರೆಂಬುದು ಸುಸ್ಪಷ್ಟವಿದೆಂದೂ ಅವರು ಅಭಿಪ್ರಾಯಪಟ್ಟಿರುವರು. ಆದರೆ ಸದ್ಯದ ಕೂಲಿಕಾರ ಸರಕಾರದವರು ಆ ರೀತಿ ಮಾಡಲಾರರೆಂದೂ ಹಿಂದುಸ್ತಾನದ ಸ್ವಾತಂತ್ರ್ಯಸೂರ್ಯ ಬೇಗನೆ ಉದಯ ಹೊಂದುವನೆಂದೂ ಆಶಿಸಲಾಗಿದೆ. ಮುಸಲ್ಮಾನರೆ ಹಿಂದೀ ಸ್ವಾತಂತ್ರ್ಯಕ್ಕೆ ಮಹತ್ವದ ತೊಡಕು. ಮುಸಲ್ಮಾನರು ಕೇವಲ ಅಲ್ಪಸಂಖ್ಯಾಕರಾಗಿಲ್ಲ. ಜಿನ್ನಾರವರು ಹಿಂದೂ ಮುಸಲ್ಮಾನ ಎರಡು ಪ್ರತ್ಯೇಕ ಜನಾಂಗವೆಂದು ಹೇಳುತ್ತಿರುವರು. ಆದರೆ ಮುಸಲ್ಮಾನರ ಸಮಸ್ಯೆ ರಾಷ್ಟ್ರೀಯ ಮತ್ತು ಧಾರ್ಮಿಕವಾಗಿರದೆ ಸಾಮಾಜಿಕ ಮತ್ತು ಆರ್ಥಿಕವಾಗಿರುವದೆಂದು ೧೯೪೨ ರ ನನ್ನ ಸಂಚಾರದ ನಂತರ ಮನವರಿಕೆಯಾಗಿದೆಂದು ಅವರು ಅಭಿಪ್ರಾಯಪಟ್ಟಿರುವರು. ಮುಸ್ಲಿಂಲೀಗು ದೊಡ್ಡ ದೊಡ್ಡ ಜಮೀನದಾರರಿಂದ ಕೂಡಿದ್ದಾಗಿದೆ. ಹಿಂದುಸ್ತಾನ ಸ್ವತಂತ್ರವಾಯಿತೆಂದರೆ ಜಮೀನದಾರಿಯನ್ನು ಕಿತ್ತಿಹಾಕುವುದೆ ಅವರ ಮೊದಲನೆ ಹೆಜ್ಜೆಯಾಗುವುದು. ಬ್ರಿಟಿಶರು ಹಿಂದುಸ್ತಾನದಲ್ಲಿ ಉಳಿದರೆ ಈ ಭೂಸುಧಾರಣೆಗೆ ಒಪ್ಪುವುದಿಲ್ಲೆಂದು ಗೊತ್ತಿದ್ದುದರಿಂದ ಮುಸ್ಲಿಂಲೀಗು ಹಿಂದೀ ಸ್ವಾತಂತ್ರ್ಯಕ್ಕೆ ಒಪ್ಪುವದಿಲ್ಲ. ಅಂತೆಯೆ ಮುಸಲ್ಮಾನ ಜನಸಾಮಾನ್ಯರು ಮುಸ್ಲಿಂಲೀಗಿನಲ್ಲಿಯ ಉಚ್ಚವರ್ಗದವರ ಬಗ್ಗೆ ಸಹಾನುಭೂತಿ ತಾಳುವುದಿಲ್ಲ.

### ಪಾಕಿಸ್ತಾನ ಯಾರಿಗೆ ?

ಮುಸಲ್ಮಾನ ಜಮೀನದಾರರು ಮತ್ತು ಜನಸಾಮಾನ್ಯರಲ್ಲಿನ ಮತಭೇದವನ್ನು ಹೋಗಲಾಡಿಸಲು ಜಿನ್ನಾರವರು ಒಂದು ಯುಕ್ತಿಯನ್ನು ಹುಡುಕಿರುವರು. ಮುಸ್ಲಿಂರಾಷ್ಟ್ರೀಯತ್ವ, ಮುಸ್ಲಿಂ ಪಾಕಿಸ್ತಾನ ಮತ್ತು ಮುಸ್ಲಿಂ ಪ್ರತ್ಯೇಕತೆ ಇವೇ ಅವರ ಉಪಾಯಗಳು. ೧೯೪೦ ರಲ್ಲಿ ಮೊದಲ ಸಲ ಅವರು ಅದನ್ನು ಸಾರಿದರು. ಪಾಕಿಸ್ತಾನವೆಂದರೆ ಪ್ರತಿಗಾಮಿ ಮತ್ತು ಜಮೀನದಾರ ಪ್ರಭುತ್ವವುಳ್ಳ ಒಂದು ಬಡ ದೇಶವಾಗುವುದು. ಅದೊಂದು ಎರಡನೆ ಇರಾಣವಾಗುವದು. ಮುಸಲ್ಮಾನ ಜಮೀನದಾರರು ಪಾಕಿಸ್ತಾನವನ್ನೇಕೆ ಬೇಡುವರೆಂಬುದಕ್ಕೆ ಕಾರಣ ಹೇಳಬಹುದಾಗಿದೆ. ಆದರೆ ಮುಸಲ್ಮಾನ ಒಕ್ಕಲಿಗರು, ಸುಶಿಕ್ಷಿತರು ಮತ್ತು ವ್ಯಾಪಾರಸ್ಥರು ಅದನ್ನು ಪುರಸ್ಕರಿಸಲು ಯಾವ ಕಾರಣಗಳನ್ನೂ ನಾನು ಕಾಣಲಾರೆ. ಶ್ರೀಮಂತ ಖಾನರು, ನವಾಬರು ಮತ್ತು ಪ್ರತಿಗಾಮಿ ಮುಲ್ಲಾಗಳು ಮಾತ್ರ ಪಾಕಿಸ್ತಾನದ ಬಗ್ಗೆ ಪ್ರಯತ್ನಿಸುತಿರುವರು. ಒಕ್ಕಲಿಗರನ್ನು ಛಲಿಸುವ ಪ್ರತಿಗಾಮಿಗಳಿಗೆ ಮಾತ್ರ ಪಾಕಿಸ್ತಾನದಿಂದ ಶಕ್ತಿ ಬರುವದೆಂದು ಮುಂತಾಗಿ ಖಾನ ಅಬ್ದುಲ್ ಗಫರ ಖಾನರನ್ನು ಭೆಟ್ಟಿಯಾದಾಗ ಹೇಳಿದರೆಂದು ಲುಯಿ ಫಿಶರರು ಬರೆದಿರುವರು. 'ಇಸ್ಲಾಮ'ಕ್ಕೆ ಅದರಿಂದ ಬಲ ಬರುವದೊ ಎಂದು ಕೇಳಿದ್ದಕ್ಕೆ 'ಜಿನ್ನಾರವರು ಮುಸಲ್ಮಾನಾಧಮರು. ಪೈಗಂಬರರ ನಿಷ್ಠಾವಂತ ಅನುಯಾಯಿಗಳಲ್ಲ ಅವರು ಎಂದೂ ಖಾನರವರು ಅಭಿಪ್ರಾಯಪಟ್ಟರು. ನೀವು ಪ್ರಥಮತಃ ಮುಸಲ್ಮಾನರಿರುವಿರಾದ್ದರಿಂದ ಮುಸಲ್ಮಾನ ರಾಷ್ಟ್ರವನ್ನು ಸ್ಥಾಪಿಸಬೇಕೆಂದು ಜಿನ್ನಾರ ಹೇಳಿಕೆ: ನೀವು ಮೊದಲು ಆರ್ಥಿಕ ದೃಷ್ಟಿಯಿಂದ ಒಕ್ಕಲಿಗರು ಧಾರ್ಮಿಕ ದೃಷ್ಟಿಯಿಂದ ಮುಸಲ್ಮಾನರು ಮತ್ತು ರಾಜಕೀಯ ದೃಷ್ಟಿಯಿಂದ ಹಿಂದೀಯರು, ಇದಿರೆಂದು ಖಾನ ಅಬ್ದುಲ ಗಫರಖಾನ ಪಂಡಿತ ಜವಾಹರಲಾಲ ನೆಹರು ಮೊದಲಾದವರು ಮುಸಲ್ಮಾನ ಜನಸಾಮಾನ್ಯರಿಗೆ ಹೇಳುವರು. 'ನೀವು

—೧೨ನೇ ಪುಟ ನೋಡಿರಿ




## ರಾಷ್ಟ್ರಪತಿಗಳು:--

ಲೇ. ಸ್ವಾತಂತ್ರ್ಯಪ್ರಿಯ. ಮಿಂಚಿನ ಬಳ್ಳಿಯ ರನ್ನಮಹೋತ್ಸವ ಸಂಚಿಕೆ. ೮ ನೆಯ ವರ್ಷದ ೨-೩ ನೆಯ ಕುಡಿ, ಕ್ರೌನ ಅಷ್ಟ ಪತ್ರದ ೩೭೨ ಪುಟಗಳು ಬೆಲೆ ೪ ರೂಪಾಯಿ. ಪ್ರಕಾಶಕರು ಮಿಂಚಿನ ಬಳ್ಳಿಯ ಚಾವಡಿ ಧಾರವಾಡ.

ಪರದಾಸ್ಯದಲ್ಲಿ ಕೊಳೆಯುತಿರುವ ಹಿಂದುಸ್ತಾನದ ಸ್ವಾತಂತ್ರ್ಯಕ್ಕಾಗಿ ರಾಷ್ಟ್ರೀಯ ಮಹಾಸಭೆಯು ಕಳೆದ ಅರವತ್ತು ವರುಷಗಳಿಂದ ಹೋರಾಡುತಿದೆ. ಅದಕ್ಕೀಗೊಂದು ಮೂರ್ತಸ್ವರೂಪ ಬಂದಿದೆ. ಈ ರಾಷ್ಟ್ರೀಯ ಮಹಾಸಭೆಯನ್ನು ಕಟ್ಟಿ ನಮ್ಮ ಸ್ವಾತಂತ್ರ್ಯ ಸಂಗ್ರಾಮವನ್ನು ಇಂದಿನ ವರೆಗೆ ಸಾಗಿಸಿಕೊಂಡು ಬಂದ ವೀರ ರಾಷ್ಟ್ರಪತಿಗಳ ಚರಿತ್ರವನ್ನು ತಿಳಿದುಕೊಂಡು ತಮ್ಮ ಜೀವನದಲ್ಲಿ ಅದನ್ನು ಅಳವಡಿಸಿಕೊಳ್ಳುವದು ಪ್ರತಿಯೊಬ್ಬ ಭಾರತೀಯನ ಕರ್ತವ್ಯವಾಗಿದೆ ಈ ರೀತಿಯಾಗಿ ಕಾಂಗ್ರೆಸಿನ ಮತ್ತು ರಾಷ್ಟ್ರದ ಸೇವೆ ಮಾಡಿದ, ಮಾಡುತಿರುವ ರಾಷ್ಟ್ರಪತಿಗಳ ವಿವರವಾದ ಚರಿತ್ರೆಯು ಕನ್ನಡ ಭಾಷೆಯಲ್ಲಿ ಈ ವರೆಗೆ ಒಂದೇ ಕಡೆಯಲ್ಲಿ ಪ್ರಸಿದ್ಧವಾಗಿರಲಿಲ್ಲ. ಮಿಂಚಿನ ಬಳ್ಳಿಯವರು ಈ ಕೊರತೆಯನ್ನು ಹೋಗಲಾಡಿಸಲು ಈ ಪುಸ್ತಕವನ್ನು ರನ್ನಮಹೋತ್ಸವದ ಕುಡಿಪೆಂದು ಪ್ರಸಿದ್ಧಿಸಿದ್ದು ಅಭಿನಂದನೀಯ ಸಂಗತಿಯಾಗಿದೆ. ಕಾಂಗ್ರೆಸ್ಸಿನ ರನ್ನಮಹೋತ್ಸವಕ್ಕಾಗಿ ಅವರು ಸಲ್ಲಿಸಿದ ಸೇವೆ ಆದರ್ಶವಾಗಿದೆ. ಈ ಪುಸ್ತಕದಲ್ಲಿ ರಾಷ್ಟ್ರೀಯ ಮಹಾಸಭೆಯ ಅಧ್ಯಕ್ಷಸ್ಥಾನವನ್ನಲಂಕರಿಸಿದ ಮಹನೀಯರ ಚರಿತ್ರೆ ಅವರ ಭಾಷಣದಲ್ಲಿಯ ಮಹತ್ವದ ಸಾರ ಅವರ ಭಾವಚಿತ್ರ ಮೊದಲಾದವುಗಳನ್ನು ಕೊಡಲಾಗಿದೆ. ಸರಳವಾದ ಭಾಷೆ ಮುದ್ದಾದ ಮುದ್ರಣ ಗ್ಲೇಜ ಕಾಗದ ಮುಂತಾದ್ದರಿಂದ ಪುಸ್ತಕವು ಆಕರ್ಷಕವಾಗಿದೆ. ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ದುಡಿದ ದುಡಿಯುತಿರುವ ವೀರ ಪುರುಷರ ಚರಿತ್ರೆಯುಳ್ಳ ಕಾಂಗ್ರೆಸ್ಸಿನ ರನ್ನಮಹೋತ್ಸವದ ಈ ಸಂಚಿಕೆಯನ್ನು ಅದೇ ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ತಮ್ಮ ಸರ್ವಸ್ವವನ್ನು ಸಮರ್ಪಿಸಿ ವೀರಸ್ವರ್ಗವನ್ನೈದಿದ ಶ್ರೀ ಕೌಜಲಗಿ ಹಣಮಂತರಾಯರ ದಿವ್ಯ ಚರಣ ಕಮಲಗಳಲ್ಲಿ ಸಮರ್ಪಿಸಿದ್ದು ಯಥೋಚಿತವಾಗಿದೆ. ಸ್ವಾತಂತ್ರ್ಯಪ್ರಿಯರು ತುರಂಗದಲ್ಲಿದ್ದಾಗ ಈ ಪುಸ್ತಕವನ್ನು ಬರೆದದ್ದರಿಂದ ಇದಕ್ಕೆ ಇನ್ನಷ್ಟು ಪಾವಿತ್ರ್ಯ. ಈ ರೀತಿ ಸರ್ವಾಂಗಸುಂದರವಾದ ಈ ಪುಸ್ತಕವನ್ನು ಕನ್ನಡಿಗರು ವಿಶೇಷತಃ ತರುಣರು ಆದರದಿಂದ ಬರಮಾಡಿಕೊಂಡು ರಾಷ್ಟ್ರಪತಿಗಳ ಜೀವನವನ್ನು ಸ್ವಾತಂತ್ರ್ಯಕ್ಕಾಗಿ ಅವರು ಮಾಡಿದ ಅದ್ಭುತತ್ಯಾಗವನ್ನು ತಿಳಿದುಕೊಂಡು ತಮ್ಮಲ್ಲಿಯೂ ಆ ದಿವ್ಯಸ್ಫೂರ್ತಿಯನ್ನು ಕಾರ್ಯಕ್ಷಮತೆಯನ್ನು ತಂದುಕೊಂಡರೆ ಲೇಖಕರ ಶ್ರಮದ ಪರಿಹಾರವಾಗುವುದು. ಮಿಂಚಿನ ಬಳ್ಳಿಯವರಿಗೂ ಪ್ರೋತ್ಸಾಹನೆ ಕೊಟ್ಟಂತಾಗಿ ಇಂಥ ಇನ್ನೂ ಅನೇಕ ಉಪಯುಕ್ತ ಪುಸ್ತಕಗಳನ್ನು ಹೊರಡಿಸಲು ಅವಕಾಶ ಕಲ್ಪಿಸಿ ಕೊಟ್ಟಂತಾಗುವದು. ಕನ್ನಡಿಗರು ಹಾಗೆ ಮಾಡುವರೆಂದು ನಂಬಿ ಬಳ್ಳಿಯವರ ಸ್ತುತ್ಯ ಉಪಕ್ರಮಕ್ಕಾಗಿ ಮತ್ತೊಮ್ಮೆ ಅವರನ್ನಭಿನಂದಿಸುತ್ತೇವೆ.

## ಬಾ

ಕಸ್ತೂರಬಾ ಇವರ ಜೀವನ ಪರಿಚಯ. ಲೇ- ನಾಡಿಗ ಕೃಷ್ಣಮೂರ್ತಿ. ಪ್ರಕಾಶಕರು ಮಾಧವ ಸನ್ಸ ಬೆಂಗಳೂರು.

ಆದರ್ಶ ಮಹಿಳೆಯರೆಂದು ಕೀರ್ತಿವೆತ್ತ ಭಾರತೀಯರ ಸಾರ್ವಾಂಗಿಕ ಉನ್ನತಿಗಾಗಿ ತಮ್ಮ ಸರ್ವಸ್ವವನ್ನೆ ಸಮರ್ಪಿಸುತಿರುವ ಮಹಾತ್ಮಾ ಗಾಂಧಿಯವರ ಸರ್ವವಿಧ ಕಾರ್ಯಗಳಲ್ಲಿ ಸಹಕರಿಸುತಿದ್ದ ಕಸ್ತೂರಬಾರವರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಶ್ರೀ ಕೃಷ್ಣಮೂರ್ತಿಯವರು ಬರೆದಿದ್ದಾರೆ. ಈ ಪುಸ್ತಕದ ಮೊದಲನೆ ಮುದ್ರಣದ ಪ್ರತಿಗಳು ಇಷ್ಟು ಬೇಗ ತೀರಿಹೋದುದೆ ಈ ಪುಸ್ತಕದ ಲೋಕಪ್ರಿಯತೆಯನ್ನು ಸ್ಪಷ್ಟಪಡಿಸುತ್ತದೆ. ಇಂಥ ಉಪಯುಕ್ತ ಪುಟ್ಟಪುಸ್ತಕ ಹೊರಡಿಸುತಿರುವದು ಅಭಿನಂದನೀಯ.

## ಭಾರತದ ವೀರ ಮಹಿಳೆಯರು

ಬರೆದವರು ಸರಸ್ವತಿದೇವಿ ಗೌಡರ. ಪ್ರಕಾಶಕರು ಲಿಂ.ವಿ. ಸಂಸ್ಥೆಯ ಸಾಹಿತ್ಯ ಸಮಿತಿ ಧಾರವಾಡ. ಕ್ರೌನ ಅಷ್ಟಪತ್ರದ ೧೪೦ ಪುಟಗಳು ಬೆಲೆ ೧-೮-೦. ಎರಡನೇ ಮುದ್ರಣ

ಒಂದೇ ವರ್ಷದಲ್ಲಿ ಮೊದಲನೆ ಮುದ್ರಣದ ಪ್ರತಿಗಳೆಲ್ಲ ತೀರಹೋದುದು ಪುಸ್ತಕದ ಲೋಕಪ್ರಿಯತೆಯನ್ನು ಸಿದ್ಧಪಡಿಸುತ್ತದೆ. ಸೌ. ಸರಸ್ವತಿಬಾಯಿಯವರು ಇಂಥ ಪುಸ್ತಕಗಳನ್ನು ಬರೆದು ಕರ್ನಾಟಕದ ಇನ್ನೂ ಸೇವೆ ಸಲ್ಲಿಸಲೆಂದು ಹಾರಯಿಸುತ್ತೇವೆ.

## ಅಮೃತ ಜೀವನ

( ಒಂದು ಪ್ರಬಂಧ ಸಂಗ್ರಹ )

ಪ್ರಬಂಧಕಾರರು— ಎಂ. ಬಿ. ಬೂದಿಹಾಳಮಠ, ಆದರ್ಶ ಜೀವನ ಗ್ರಂಥಮಾಲೆ ರಾಣೀಬೆನ್ನೂರು. ಪುಟ ೧೪೪- ಬೆಲೆ ೧-೮-೦.

ಇದು ಎಂಟು ಪ್ರಬಂಧಗಳ ಒಂದು ಸಂಗ್ರಹ. ಪ್ರಬಂಧಕಾರರು ಜೀವನವು ಅಮೃತವಾಗಬೇಕೆಂಬ ಘನೋದ್ದೇಶದಿಂದ ಪ್ರೇರಿತರಾಗಿ ಎಂಟು ನಿಟ್ಟುಗಳಿಂದ ಜೀವನವನ್ನು ನೋಡಿದ್ದಾರೆ. ಮೊದಲನೇ ಪ್ರಬಂಧದಲ್ಲಿ ಅ-ಮೃತ ಜೀವನ ಅಮೃತ ಜೀವನವೆಂಬುದನ್ನು ವಿಚಾರಪ್ರಚೋದಕವಾದ ಮನೋಹರ ಶೈಲಿಯಲ್ಲಿ ಪ್ರತಿಪಾದಿಸಿರುವರು. ಅಲ್ಲಲ್ಲಿ ಆನುಷಂಗಿಕವಾಗಿ ವೇದ-ಉಪನಿಷತ್ತು-ಮಹಾಭಾರತ—ಶಿವಶರಣರ—ಹರಿದಾಸರ ವಚನಗಳಿಂದ ತಮ್ಮ ಪ್ರತಿಪಾದನೆಗೆ ಪುಷ್ಟಿಯನ್ನು ಒದಗಿಸಿದ್ದಾರೆ. ಎರಡನೆಯ ಪ್ರಬಂಧದಲ್ಲಿ ಜೀವನಧರ್ಮವಾವುದೆಂಬುದನ್ನು ಕುರಿತು ಅಮೋಘವಾದ ಚರ್ಚೆಯನ್ನು ಮಾಡಿದ್ದಾರೆ. ಧರ್ಮದ ಹೆಸರಿನಲ್ಲಿ ನಡೆವ ಪರಸ್ಪರ ಕಲಹ ದ್ವೇಷ ಅಸೂಯೆಗಳ ವಿಷಯದಲ್ಲಿ ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸಿ "ನಮ್ಮ ಇಂದಿನ ಪರಿಸ್ಥಿತಿಯಲ್ಲಿ ನಾವು ಎದೆಗುಂದಬೇಕಾಗಿಲ್ಲ. ಹೊಸ ಚೇತನೆಯ ಹುಟ್ಟನಿಂದ ಇಂದು ಭರವಸೆ ಮೂಡುತಿದೆ. ಈ ಹೊಸ ಹುಟ್ಟಿಗೆ ನಮ್ಮ ಗತಿಸಿದ ಮಾನವ ದಿವ್ಯ ಸಂದೇಶದಿಂದ ಹೊಸ ಜಗತ್ತನ್ನು ನಿರ್ಮಿಸಬೇಕು ಎಂಬ ಗತಿಯನ್ನು ಕೊಡಬೇಕು" ಎಂದು ಸೂಚಿಸಿರುವರು. ಮೂರನೇ ಪ್ರಬಂಧದಲ್ಲಿ ನಮ್ಮ ವಿದ್ಯೆಯ ಗುರಿಯೇನಿರಬೇಕೆಂಬುದನ್ನು ಗಂಭೀರವಾಗಿ ವಿವೇಚಿಸಿರುವರು. ವಿದ್ಯೆಯು ವಿಮುಕ್ತಿಗಾಗಿ ಎಂಬ ಸೂತ್ರವನ್ನು ತಿಳಿತಿಳಿಯಾಗಿ ಬಿಡಿಸಿ ಅದರ ಗುಟ್ಟನ್ನು ಈ ಪ್ರಬಂಧದಲ್ಲಿ ಚೆನ್ನಾಗಿ ಅರುಹಿರುವರು. ಕಲೆ ಮತ್ತು ಕಲ್ಯಾಣ, ಪ್ರತಿಭೆ ಮತ್ತು ಸಂಪ್ರದಾಯ, ಸಾಹಿತ್ಯ ಮತ್ತು ಜೀವನ, ಜಾಗ್ರತ ನಾರಿಯರು, ಸಂಗಮ ಎಂಬ ಉಳಿದ ಪ್ರಬಂಧಗಳು ಕೂಡ ವಿಚಾರಪರಿಪ್ಲುತವಾಗಿವೆ ವೇದೋಪನಿಷತ್ತು, ಶೇಕ್ಸಪಿಯರ, ಶೆಲೆ, ಮಿಲ್ಟನ ಬೈರನ್, ಕಾರ್ಲೈಲ್, ಗಯಟೆ, ಷಾ, ಚೆಸ್ಟರ್ಟನ್, ಗಾರ್ಕಿ ಮುಂತಾದ ಪಾಶ್ಚಾತ್ಯ ಲೇಖಕರ ಬರೆಹಗಳಿಂದ ಉತ್ತಮವಾದ ಮಾತದ ಮಾತುಗಳನ್ನಾಯ್ದು ಅವುಗಳ ಆಧಾರದಿಂದ ತಮ್ಮ ಸಿದ್ಧಾಂತಗಳಿಗೆ ಕಳೆಯನ್ನು ಕಟ್ಟಿರುವರು. ಮುನ್ನುಡಿಯಲ್ಲಿ ಶ್ರೀ ಶಿವಮೂರ್ತಿ ಶಾಸ್ತ್ರಿಗಳು ಹೇಳಿದಂತೆ "ಈ ಗ್ರಂಥವು ನಮ್ಮ ನಾಡಿನ ಜನರಿಗೆ ಅಮೃತ ಸಂದೇಶವನ್ನು ನೀಡಲು ಸಮರ್ಥವೆನಿಸಿರುವದು.' ಪ್ರಬಂಧಗಳ ಶೈಲಿಯು ತಿಳಿಗನ್ನಡದ ಉದಾತ್ತ ಗಂಭೀರ ಮನೋಹರ ಶೈಲಿಯಾಗಿದೆ. ಶ್ರೀ. ಬೂದಿಹಾಳಮಠರ ಪ್ರಬಂಧ ಸಂಗ್ರಹವು ಅವರ ವಿದಗ್ಧತೆಯ ಪ್ರತೀಕವಾಗಿದೆ. ಶ್ರೀ ಬೂದಿಹಾಳಮಠರಂತಹ ವಿಚಾರಶೀಲರು ನಾಡಿನ ಮುಂದಾಳುಗಳಾಗಿ ಅಜ್ಞಜನತೆಯ ಮನದಲ್ಲಿ ಬೇರು ಬಿಟ್ಟ ಜಾತೀಯ ಸಂಕುಚಿತ ವೃತ್ತಿಯನ್ನು ಅಳಿಯಲು ಧೈರ್ಯದಿಂದ ಮುಂದೆ ಬಂದರೆ ಕನ್ನಡ ನಾಡು-ನುಡಿಗಳ ಭವಿತವ್ಯವು ಉಜ್ವಲವಾಗುವದೆಂದು ಹೇಳದಿರಲಾರೆವು.

## ಗಳಗನಾಥ

( ಜೀವನ-ವಾಙ್ಮಯ ವಿಮರ್ಶೆ )

ಪ್ರಕಾಶಕರು– ಕಾಂತೇಶ ಕಮಲಾಪುರ ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ. ಪುಟಗಳು ೪-೫೯--೧೩ ಬೆಲೆ ೧-೮-೦

೨೨-೪-೪೫ ನೇ ದಿನಾಂಕದಲ್ಲಿ ಮುಂಬಯಿಯ ಸಂಯುಕ್ತ ಕರ್ನಾಟಕ ಸಂಘದ ಆಶ್ರಯದಲ್ಲಿ ಏರ್ಪಡಿಸಿದ ವಿಚಾರ ಸಂಕಿರಣದ ಸಮಯಕ್ಕೆ ಬರೆದ ನಾಲ್ಕು ಪ್ರಬಂಧಗಳ ಸಂಗ್ರಹವಿದು. ದಿವಂಗತ ವೆಂಕಟೇಶ ತಿರಕೋ ಕುಲಕರ್ಣಿ ಗಳಗನಾಥರು ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆಯ ಬೆಲೆ ಕಟ್ಟಲು ಪ್ರಬಂಧಕಾರರು ಪ್ರಯತ್ನ ಪಟ್ಟಿರುವರು. ಶ್ರೀ ಇನಾಮದಾರರು 'ಗಳಗನಾಥರ ಕಾಲ' ವೆಂಬ ಪ್ರಬಂಧದಲ್ಲಿ ಆ ಕಾಲದ ಹಿಂದು ಮುಂದಿನ ನೋಟಗಳನ್ನು ಕೊಡಲು ಸಾಹಸಪಟ್ಟಿರುವರು. ಆ ಕಾಲದ ಅಭಿರುಚಿ ಸಂಕೇತಗಳಾವವು ? ಸ್ಫೂರ್ತಿ-ಪ್ರೇರಣೆಗಳೇನು ? ಎಂಬ ವಿಚಾರಗಳನ್ನು ಕುರಿತು ಶ್ರೀ ಇನಾಮದಾರರು ತಮ್ಮ ಪ್ರಬಂಧದಲ್ಲಿ ಚರ್ಚಿಸಿರುವರು. ಶ್ರೀ ನೆರಂಗರು ಗಳಗನಾಥರ ಜೀವನ ಹಾಗೂ ವ್ಯಕ್ತಿಪರಿಚಯವನ್ನು ಮಾಡಿಕೊಟ್ಟಿರುವರು. "ಗಳಗನಾಥರ ಗ್ರಂಥಗಳಲ್ಲಿ ಅವರ ವ್ಯಕ್ತಿತ್ವದ ಪ್ರತಿಬಿಂಬವು ಕಾಣುತ್ತದೆ; ಅವರ ಬರಹದ ಉದ್ದೇಶ ಉಚ್ಚ ಆದರ್ಶವಾಗಿದ್ದಿತಲ್ಲದೆ ಬರಹಕ್ಕಾಗಿ ಬರಹವಾಗಿದ್ದಿಲ್ಲ" ಎಂದು ಶ್ರೀ ಪಾಟೀಲರು ತಮ್ಮ ವಿಮರ್ಶೆಯ ತೀರ್ಪನ್ನು ಕೊಟ್ಟಿದ್ದಾರೆ. ಶ್ರೀ ಕೃಷ್ಣಕುಮಾರ ಕಲ್ಲೂರರು ಗಳಗನಾಥರ ಕೃತಿಗಳಲ್ಲಿ ಕನ್ನಡನಾಡಿನ ವೈಶಿಷ್ಟ್ಯವು ಒಡಮೂಡಿದೆಯೆಂದು ಯಥಾರ್ಥ ಮಾತನ್ನುಸುರಿದ್ದಾರೆ. ಪ್ರೊ. ಜಾಗಿರದಾರರು ಮುನ್ನುಡಿಯಲ್ಲಿ ೬೦ ವರ್ಷಗಳ ಹಿಂದಿನ ಕನ್ನಡಚಳವಳದ ಸ್ವರೂಪ ದಿಗ್ದರ್ಶನವನ್ನು ಮಾಡಿಕೊಟ್ಟು ಪುಸ್ತಕದ ಉಪಯುಕ್ತತೆಯನ್ನು ಬೆಳೆಸಿರುವರು. ಈ ಪ್ರಬಂಧಗಳು ಗಳಗನಾಥರ ಜೀವನ ಹಾಗೂ ಕೃತಿಗಳ ಸಂಪೂರ್ಣ ವಿಮರ್ಶೆಯೆಂದು ಯಾರೂ ಹೇಳಲಾರರು. ವಿಶಿಷ್ಟ ಪ್ರಸಂಗಕ್ಕಾಗಿ ಆ ಪ್ರಸಂಗದ ಔಚಿತ್ಯ ಸಮಯಾವಧಿಗಳನ್ನನುಲಕ್ಷಿಸಿ ದಿಗ್ದರ್ಶಕವಾಗಿ ಬರೆದ ಪ್ರಬಂಧಗಳೆಂಬುದರಿಂದ ಅವುಗಳಿಗೆ ಪರಿಪೂರ್ಣತೆಯ ಸ್ವರೂಪ ಬರಲಾರದು. ಪ್ರಬಂಧಕಾರರಿಗಾದರೂ ಈ ಮಾತು ಗೊತ್ತಿದೆಯೆಂಬುದನ್ನು ಮುನ್ನುಡಿಕಾರರು ಬಿಚ್ಚಿ ಹೇಳಿದ್ದಾರೆ. ಈ ಪ್ರಬಂಧಗಳನ್ನು ಅವಸರದಿಂದ ಇದ್ದರೂಪದಲ್ಲಿಯೇ ಪ್ರಸಿದ್ಧಿಸುವದಕ್ಕಿಂತ ಗಳಗನಾಥರ ಕೃತಿಗಳ ಸವಿವರ ವಿಮರ್ಶೆಗಳನ್ನೊಳಗೊಂಡ ಹೆಚ್ಚು ಪ್ರಬಂಧಗಳನ್ನು ಸೇರಿಸಿ ಪ್ರಸಿದ್ಧಿಸಿದ್ದರೆ ಪುಸ್ತಕದ ಕಳೆ ಹೆಚ್ಚುತಿತ್ತು. ಆದರೂ ಗಳಗನಾಥರ ಸಾಹಿತ್ಯಸೇವೆಯ ಮಹತ್ವವನ್ನರಿತುಕೊಳ್ಳಲು ಈ ಕಿರಿ ಹೊತ್ತಿಗೆಯು ಉತ್ತಮ ಕೈದೀವಿಗೆಯಾಗಿದೆಯೆಂದು ನಿಃಸಂಕೋಚವಾಗಿ ಹೇಳಬಹುದು. ಪುಸ್ತಕದ ಗಾತ್ರವನ್ನು ನೋಡಿದರೆ ಅದಕ್ಕಿಟ್ಟ ಬೆಲೆ ತುಸು ಹೆಚ್ಚೆಂದೆನಿಸುತ್ತದೆ. ಪ್ರಬಂಧಗಳ ಶೈಲಿಯು ತಿಳಿತಿಳಿಯಾಗಿ ಸೊಗಸಾಗಿದೆ.

## ಹಿಂದೂ ಧರ್ಮ (ಪರಿಚಯ)

ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ ಮೈಸೂರು, ಕ್ರೌನ ಅಷ್ಟ ಪತ್ರದ ೪೮ ಪುಟಗಳು ಬೆಲೆ ನಾಲ್ಕಾಣೆ. ಮೈಸೂರು ಸಂಸ್ಥಾನದಲ್ಲಿ ವಯಸ್ಕರ ಶಿಕ್ಷಣಕ್ಕಾಗಿ ಎಷ್ಟೊಂದು ಪ್ರಯತ್ನ ನಡೆಯುತಿದೆಂಬುದು ಗೊತ್ತಿದ್ದ ಸಂಗತಿ. ವಯಸ್ಕರಿಗೆ ಕೇವಲ ಅಕ್ಷರ ಜ್ಞಾನ ಮಾಡಿಕೊಟ್ಟರೆ ಸಾಲದು. ಆ ಅಕ್ಷರಗಳ ಪರಿಚಯವನ್ನಿಟ್ಟುಕೊಂಡು ತಮ್ಮ ಜ್ಞಾನವನ್ನಭಿವೃದ್ಧಿಪಡಿಸಿಕೊಳ್ಳುವದಕ್ಕಾಗಿ ಚಿಕ್ಕಪುಟ್ಟ ಇಂಥ ಉಪಯುಕ್ತ ಪುಸ್ತಕಗಳನ್ನು ಹೊರಡಿಸುವದು ಅತ್ಯವಶ್ಯವಾಗಿದೆ. ಈ ಬಗೆಯ ಧಾರ್ಮಿಕ ಪುಸ್ತಕಗಳಲ್ಲದೆ ರಾಷ್ಟ್ರಪುರುಷರ, ಸಮಾಜ ಸೇವಕರ ಪುಸ್ತಕಗಳನ್ನು ಪ್ರಸಿದ್ಧಿಸಬೇಕು. ವಯಸ್ಕರು ಮತ್ತು ಇತರರು ಈ ಪುಸ್ತಕಗಳ ಲಾಭ ಮಾಡಿಕೊಂಡು ತಮ್ಮ ಜ್ಞಾನದ ಅಂತಸ್ತನ್ನು ಏರಿಸಿಕೊಳ್ಳುವದಲ್ಲದೆ ಶಿಕ್ಷಣಮಾಲೆಯನ್ನು ಪ್ರೋತ್ಸಾಹಿಸಬೇಕು.

## ಕಾಣಿಕೆ

ಶ್ರೀ ಬಿ. ಎಂ. ಶ್ರೀ ಯವರ ನೆನಹಿಗಾಗಿ ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯವರು ಪ್ರಸಿದ್ಧಿಸಿದ್ದ ಪುಟ್ಟ ಪುಸ್ತಕ ಬೆಲೆ ಎಂಟಾಣೆ.

ಕನ್ನಡದ ಆಚಾರ್ಯಪುರುಷರಾಗಿದ್ದ ಶ್ರೀ ಯವರ ಅಲ್ಪಪರಿಚಯವನ್ನು ಕೊಟ್ಟಿದ್ದಲ್ಲದೆ ಅವರು ರಚಿಸಿದ ಕವಿತೆಗಳಲ್ಲಿ ಕೆಲವ[illegible] ಪ್ರಸಿದ್ಧಿಸಿದ್ದಾರೆ. ವಯಸ್ಕರಿಗೆ ಮಾತ್ರವೆ ಇದು ಉಪಯುಕ್ತವಾಗಿರದೆ ಉಳಿದವರಿಗೂ ಉಪಯುಕ್ತವಾಗಿದೆ ಎಲ್ಲರೂ ಇದರ ಲಾಭ ಪಡೆಯಬೇಕು.

## ನಿರ್ಮಾಣ ಕಾರ್ಯಕ್ರಮ

ಲೇ:- ಮಹಾತ್ಮಾ ಗಾಂಧಿ. ಮೈಸೂರು ಕಾಂಗ್ರೆಸ್ಸಿನ ಪ್ರಚಾರ ಮಾಲೆಯ ಮೊದಲನೆಯ ಪುಷ್ಪ ಬೆಲೆ ನಾಲ್ಕಾಣೆ.

'ಕಾಂಗ್ರೆಸ್ಸಿನ ರೀತಿ ನೀತಿ, ವಿಚಾರಗಳ ಬಗ್ಗೆ ದೇಶದ ಸಾವಿರ ಪ್ರಶ್ನೆಗಳಿಗೆ ಕಾಂಗ್ರೆಸ್ಸು ಕೊಡಬೇಕೆನ್ನುವ ಉತ್ತರ ಪರಿಹಾರಗಳ ಬಗ್ಗೆ ನಮ್ಮ ಜನರಲ್ಲಿ ಹೆಚ್ಚು ಹೆಚ್ಚಾಗಿ ತಿಳಿವನ್ನು ಹರಡಲು ಕೆಲವು ಚಿಕ್ಕಚಿಕ್ಕ ಪುಸ್ತಕಗಳನ್ನು ಬರೆಸಿ ಅಚ್ಚುಹಾಕಿಸಬೇಕೆಂದು ನಿರ್ಧರಿಸಲಾಗಿದೆ'ಂದು ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷ ಶ್ರೀ ಸಿದ್ಧವನಹಳ್ಳಿ ನಿಜಲಿಂಗಪ್ಪನವರು ಈ ಪುಸ್ತಕದ ಬಿನ್ನಹದಲ್ಲಿ ಬರೆದಿದ್ದಾರೆ. ಅಗಸ್ಟ ೯ ನೆಯ ತಾರೀಕಿನ ಶುಭ ಪ್ರಸಂಗದಲ್ಲಿ ಮಹಾತ್ಮರ ನಿರ್ಮಾಣಕಾರ್ಯಕ್ರಮದಂಥ ಮಹತ್ವದ ಮತ್ತು ಉಪಯುಕ್ತ ಪುಸ್ತಕವನ್ನು ಪ್ರಸಿದ್ಧಿಸಿ ಈ ಕಾರ್ಯದಲ್ಲಿ ಮುಂಪಡಿಯಿಟ್ಟಿದ್ದಾರೆ. ಕನ್ನಡಿಗರು ಈ ಮಾಲೆಗೆ ತುಂಬ ಪ್ರೋತ್ಸಾಹನೆ ಕೊಟ್ಟು ತಮ್ಮ ಜ್ಞಾನವನ್ನು ಅಭಿವೃದ್ಧಿಪಡಿಸಿಕೊಳ್ಳಬೇಕೆಂದು ಸೂಚಿಸುತ್ತೇವೆ.

## ಉಪನ್ಯಾಸ ಸಂಗ್ರಹ

ನವಲಗುಂದದಲ್ಲಿ ಕೂಡಿದ ಸರ್ವಧರ್ಮ ಪರಿಷತ್ತಿನ ಪ್ರಥಮ ಅಧಿವೇಶನದಲ್ಲಿ ಬೇರೆ ಬೇರೆ ಮಹನೀಯರು ಮಾಡಿದ ಉಪನ್ಯಾಸಗಳ ಸಂಗ್ರಹವನ್ನು ಶ್ರೀ ಎಂ. ಜಿ. ವಿರುಪಾಕ್ಷನ್‌ರು ಸಂಗ್ರಹಿಸಿ ಪ್ರಸಿದ್ಧಿಸಿದ್ದಾರೆ. ಅಲ್ಲದೆ ಪರಿಷತ್ತಿನ ಕಾರ್ಯಕಲಾಪಗಳನ್ನು ಇದರಲ್ಲಿ ಸೇರಿಸಿದ್ದಾರೆ. ಧಾರ್ಮಿಕ ಭಾವನೆಗಳು ಅಳಿಯುತ್ತಿರುವ ಈ ಕಾಲದಲ್ಲಿ ಇಂಥ ಸರ್ವಧರ್ಮ ಪರಿಷತ್ತು ಸೇರಿಸಿ ಆಯಾ ಧರ್ಮಗಳ ತಿರುಳನ್ನು ತಿಳಿಸಿಕೊಡುವ ಪ್ರಯತ್ನ ಮಾಡಿದುದು ಅಭಿನಂದನೀಯ. ಕನ್ನಡಿಗರು ಈ ಉಪನ್ಯಾಸಗಳನ್ನು ಓದಿಕೊಂಡು ಹಿಂದುಸ್ತಾನದಲ್ಲಿಯ ಧರ್ಮಗಳ ತಿರುಳನ್ನು ತಿಳಿದುಕೊಳ್ಳಬೇಕೆಂದು ಸೂಚಿಸಬಯಸುತ್ತೇವೆ.

## ಹಜರತ್ ಮುಹಮ್ಮದ ಪೈಗಂಬರ

(ಸ. ಅ.) ರವರ ಜನ್ಮದಿನ ಹಬ್ಬ 'ತಮೀರೆ ಮಿಲ್ಲ'ತ್ ರಾತ್ರಿಶಾಲೆ ಬದ್ರಿಯಾಮೊಹಲ್ಲಾ ಮಂಗಳೂರು ದ. ಕ. ಬೆಲೆ ೪ ಆಣೆ.

ಹಜರತ್ ಮುಹಮ್ಮದ ಪೈಗಂಬರ (ಸ. ಅ.) ರವರ ತತ್ವಬೋಧಗಳನ್ನು ಸಂಕ್ಷೇಪತಃ ಈ ಚಿಕ್ಕ ಪುಸ್ತಕದಲ್ಲಿ ಕೊಡಲಾಗಿದೆ. ಕನ್ನಡದಲ್ಲಿ ಇಂಥ ಪುಸ್ತಕಗಳು ವಿರಳ. ಆದರೆ ಇಂಥ ಸಣ್ಣ ಪುಸ್ತಕಗಳಿಂದಲೆ ಕನ್ನಡಿಗರ ಹಸಿವು ಹಿಂಗದು. ದೊಡ್ಡ ಹೊತ್ತಿಗೆಗಳನ್ನು ಹೊರಡಿಸಿ ಪೈಗಂಬರರ ಉಪದೇಶಾಮೃತವನ್ನು ಕನ್ನಡಿಗರಿಗೆ ಉಣಿಸಬೇಕೆಂದು ಕೇಳಿಕೊಳ್ಳುತ್ತೇವೆ.

## ವರದಿಗಳು

ಮಾಧ್ವಸಂಘ ಸಿಕಂದರಾಬಾದ (೨ ನೇ ವರ್ಷದ ವರದಿ), ಕರ್ನಾಟಕ ಕ್ಲಬ್ ಸಿಕಂದರಾಬಾದ South Canara Sporting Association Bombay. ೧೬ ನೇ ವಾರ್ಷಿಕ ವರದಿ League of Nations Report on the work of the League 1943-44. ಈ ವರದಿಗಳನ್ನು ಆದರದಿಂದ ಬರಮಾಡಿಕೊಂಡು ಆಯಾ ಸಂಘ ಸಂಸ್ಥೆಗಳು ಇನ್ನೂ ಹೆಚ್ಚು ಕಾರ್ಯ ಮಾಡಲೆಂದು ಹಾರೈಸುತ್ತೇವೆ.

## ಯಾರೂ ಉಪವಾಸ ಸಾಯರು'

ಮುಂಬಯಿ ಪ್ರಾಂತದ ಆಡಳಿತೆಯನ್ನು ಕಾಂಗ್ರೆಸ್ಸು ವಹಿಸಿಕೊಂಡು ಮೂರು ವಾರಗಳಾದವು. ಯುಗಾದಿ ಪ್ರತಿಪದೆಯ ಶುಭ ಮುಹೂರ್ತದಲ್ಲಿ ಅಧಿಕಾರ ನಿರ್ವಹಿಸಿಕೊಂಡು ಜನೋಪಯೋಗಿ ಕಾರ್ಯಗಳನ್ನು ಮಂತ್ರಿಗಳು ಭರದಿಂದ ಸಾಗಿಸಿದ್ದಾರೆ. ಯುದ್ಧ, ಬರಗಾಲ, ಅನ್ನಾಭಾವ, ತೇಜಿ ಧಾರಣೆ ಮೊದಲಾದವುಗಳಿಂದ ಪ್ರಾಂತದ ಪರಿಸ್ಥಿತಿ ಹದಗೆಟ್ಟಿದೆ. ಅದರಲ್ಲಿಯೂ ಹೊಣೆಗೆಟ್ಟ ಆಳಿಕೆ ಪ್ರಾಂತದಲ್ಲಿ ಕಳೆದ ಆರೂವರೆ ವರುಷಗಳಿಂದ ನಡೆದಿದ್ದರಿಂದ ಜನತೆಯ ಸಂಕಷ್ಟಗಳು ಮತ್ತಷ್ಟು ಹೆಚ್ಚಿವೆ. ಇಷ್ಟೆಲ್ಲ ವಿಷಮ ಪರಿಸ್ಥಿತಿಯಲ್ಲಿ ಲೋಕ ಪ್ರತಿನಿಧಿಗಳು ಅಧಿಕಾರ ವಹಿಸಿ ಒಳ್ಳೆ ಧೈರ್ಯದಿಂದ ಮುಂದಡಿಯಿಡಲು ಪ್ರಾರಂಭಿಸಿದ್ದಾರೆ. ತಮ್ಮ ಹೊಣೆಗಾರಿಕೆಯ ಅರಿವು ಅವರಿಗೆ ಚೆನ್ನಾಗಿದೆಯೆಂಬುದನ್ನು ಬೇರೆ ಹೇಳಬೇಕಿಲ್ಲ. ಪ್ರಾಂತದಲ್ಲಿಯ ಜನ ಸಾಯದಂತೆ ನೋಡಿಕೊಳ್ಳುವುದು ಸರಕಾರದ ಮುಖ್ಯ ಕೆಲಸವಾಗಿದ್ದು ಅದನ್ನು ಮಾಡುವುದಾಗಿ ಅವರು ಆಶ್ವಾಸನ ಕೊಟ್ಟಿದ್ದಾರೆ. ಪೂರಯಿಕೆ ಮಂತ್ರಿಗಳಾದ ಮಾನ್ಯ ದೇಸಾಯರು ಕರ್ನಾಟಕದ ಸಂಚಾರದಲ್ಲಿ ಹುಬ್ಬಳ್ಳಿಯಲ್ಲಿ ಆ ರೀತಿ ಆಶ್ವಾಸನ ಕೊಟ್ಟಿರುವರು. ಉಪವಾಸದಿಂದ ಯಾರೂ ಸಾಯದಂತೆ ನೋಡಿಕೊಳ್ಳುವೆವು. ಆದರೆ ಜನ ಭೋಗ್ಯ ವಸ್ತುಗಳ ಲಾಲಸೆ ಬಿಟ್ಟುಗೊಟ್ಟು ಸರಕಾರದ ಗೂಡ ಸಹಕರಿಸಬೇಕು' ಎಂದು ಮಾನ್ಯ ದೇಸಾಯರು ಹೇಳಿದರು. ಮುಖ್ಯ ಮಂತ್ರಿಗಳಾದ ಖೇರರು ಮುಂಬಯಿ ಪತ್ರಿಕಾ ಪರಿಷತ್ತಿನಲ್ಲಿಯೂ ಈ ಬಗ್ಗೆ ಆಶ್ವಾಸನ ಕೊಟ್ಟದ್ದಾರೆ. ಈ ಸಂದರ್ಭದಲ್ಲಿ ಜನತೆಯ ಕರ್ತವ್ಯ ನಿಚ್ಚಳನಾಗಿದೆ. ಸಮೃದ್ಧಿ ಕಾಲದಲ್ಲಿಯಂತೆ ಸುಖಸೌಕರ್ಯಗಳಿಂದ ಕಾಲ ಕಳೆಯುವ ಹಂಬಲ ಬಿಟ್ಟುಗೊಡಬೇಕು. ನಮ್ಮ ಪ್ರಾಂತ ಸದ್ಯಕ್ಕಂತೂ ಕೊರತೆಯ ಪ್ರಾಂತವಾಗಿದೆ. ಹೊರಗಿನಿಂದ ಕಾಳು ತರಿಸುವುದವಶ್ಯ. ಹೊರಗಿನಿಂದ ಬರದಿದ್ದರೆ ಪರಿಸ್ಥಿತಿ ಭೀಕರವಾಗಬಹುದು ಇದನ್ನೆಲ್ಲ ಅರಿತುಕೊಂಡು ಪ್ರಾಂತದಲ್ಲಿಯ ಜನರು ಆಹಾರ ಪದಾರ್ಥಗಳು ನಾಶವಾಗದಂತೆ ಸರ್ವ ರೀತಿಯಿಂದಲೂ ನೋಡಿಕೊಳ್ಳಬೇಕು. ಅಲ್ಲಲ್ಲಿನ ಅಧಿಕಾರಿಗಳೂ ಹೆಚ್ಚು ಕಾರ್ಯಕ್ಷಮರಾಗಿ ಕಾಳು ಕೆಡದಂತೆ, ಅಪವ್ಯಯವಾಗದಂತೆ ಅಪಹರಿಸಲ್ಪಡದಂತೆ ನೋಡಿಕೊಳ್ಳಬೇಕು.

## ಸ್ತುತ್ಯ ಉಪಕ್ರಮ

ಈ ರೀತಿ ಮುಂಬಯಿ ಸರಕಾರದವರು ಆಹಾರ ಸಮಸ್ಯೆ ಬಿಡಿಸುವುದಲ್ಲದೆ ಉಳಿದ ಮಹತ್ತ್ವದ ಕಾರ್ಯಕ್ಕೂ ಅಣಿಯಾಗಿದ್ದಾರೆ. ವಿಚಾರಣೆಯಿಲ್ಲದೆ ನಿರ್ಬಂಧದಲ್ಲಿಡಲ್ಪಟ್ಟವರನ್ನೂ ಆಗಷ್ಟ ಚಳವಳಿಯಲ್ಲಿ ಶಿಕ್ಷೆ ವಿಧಿಸಲ್ಪಟ್ಟವರನ್ನೂ ಬಿಡುಗಡೆಮಾಡಿದ್ದಲ್ಲದೆ ಕಾಂಗ್ರೆಸ ಕಾರ್ಯಕರ್ತರ ಮೇಲಿದ್ದ ವಾರಂಟುಗಳನ್ನು ಹಿಂತೆಗೆದುಕೊಂಡಿದ್ದಾರೆ. ಸಾಮುದಾಯಿಕ ದಂಡ, ಪುಂಡ ಗಂದಾಯ ಮೊದಲಾದ್ದನ್ನೆಲ್ಲ ತಿರುಗಿ ಕೊಡುವ ಉಪಕ್ರಮ ಕೈಕೊಂಡಿರುವರು. ಲೋಕಪ್ರತಿನಿಧಿಗಳು ಆಡಳಿತ ವಹಿಸಿಕೊಂಡ ಕೂಡಲೆ ಪ್ರಾಥಮಿಕ ಶಿಕ್ಷಕರ ಸಂಬಳದ ಸಮಸ್ಯೆಯನ್ನು ಅವರಿಗೆ ಬಿಡಿಸಬೇಕಾಯಿತು. ಅವರ ಪ್ರಶ್ನೆ ಸಹಾನುಭೂತಿಯಿಂದ ಬಿಡಿಸುವುದಾಗಿ ಆಶ್ವಾಸನ ಕೊಟ್ಟಿರುವರು. ಅವರ ಆಶ್ವಾಸನದಂತೆ ಶಿಕ್ಷಕರೂ ಸಂಪನ್ನು ಹಿಂತೆಗೆದುಕೊಂಡದ್ದು ಉಚಿತವಾಗಿದೆ. ಪ್ರಾಥಮಿಕ ಶಿಕ್ಷಕರ ಸಂಬಳ ಸಮಸ್ಯೆ ಬಹಳ ಹಳೆಯದಿದ್ದು ಅದನ್ನು ಇಡಿಯಾಗಿ ವಿಚಾರಿಸಿ ಸಮಾಧಾನಕರ ಬಿಡಿಸುವುದವಶ್ಯವಾಗಿದೆ. ಪ್ರಾಂತದಲ್ಲಿಯ ವಿವಿಧ ಕೂಲಿಕಾರರ ಸಮಸ್ಯೆಗಳನ್ನೂ ವಿಚಾರಿಸಿ ಒಡೆಯ ಕೂಲಿಕಾರರಲ್ಲಿ ತಿಕ್ಕಾಟವುಂಟಾಗದಂತೆ ನೋಡಿಕೊಳ್ಳಲು ಕೂಲಿಕಾರ ಸಮಸ್ಯೆಯಲ್ಲಿ ನಿಷ್ಣಾತರಾದ ಮಂತ್ರಿವರ್ಯ ನಂದಾರವರು ಅಣಿಯಾಗಿದ್ದಾರೆ. ಶಿಕ್ಷಣ ಖಾತೆಯನ್ನು ಪುನರ್ಘಟಿಸುವುದು, ಭಾಷಾನ್ವಯ ವಿಶ್ವವಿದ್ಯಾಲಯ ಸ್ಥಾಪನೆ, ಸೆರೆಮನೆಯ ಸುಧಾರಣೆ ಮೊದಲಾದವುಗಳೂ ಮಹತ್ವದ ವಿಷಯವಾಗಿದ್ದು ಮಂತ್ರಿಮಂಡಲಗಳು ಸಮಾಧಾನಕರವಾಗಿ ಬಗೆಹರಿಸಲು ಸನ್ನದ್ಧವಾಗಿವೆ. ಎಲ್ಲಕ್ಕೂ ಮಹತ್ವದ್ದೆಂದರೆ ಪ್ರಾಂತದಲ್ಲಿ ಹೆಚ್ಚು ಆಹಾರ ಪದಾರ್ಥಗಳು ಬೆಳೆಯುವಂತೆ ನೋಡಿಕೊಳ್ಳುವುದು. ಬರಗಾಲದ ಬವಣೆ ತಪ್ಪಿಸುವದು,

# ಸಂಪಾದಕೀಯ

# ಟೀಕೆ-ಟಿಪ್ಪಣೆಗಳು

ಎಲ್ಲರಿಗೂ ಆಹಾರ ಪದಾರ್ಥಗಳ ಹಂಚಿಕೆ ಸಮವಾಗಿ ಆಗುವಂತೆ ನೋಡಿಕೊಳ್ಳುವದು. ಪ್ರಾಂತದಲ್ಲಿ ನೀರಾವರಿ ಯೋಜನೆಯಿಲ್ಲದ್ದರಿಂದ ಒಕ್ಕಲಿಗರಿಗೆ ಒಕ್ಕಲತನ ಸುಧಾರಿಸಿಕೊಂಡು ಹೆಚ್ಚು ಬೆಳೆ ಬೆಳೆಯಲು ಆವಶ್ಯಕ ಅನುಕೂಲತೆ ಸಾಕಷ್ಟಿಲ್ಲದ್ದರಿಂದ ನಮ್ಮ ಪ್ರಾಂತ ಬರಗಾಲಕ್ಕೆ ತುತ್ತಾಗಿ ಕೊರತೆ ಪ್ರಾಂತವಾಗಿ ಪರಿಣಮಿಸಿದೆ. ಇದನ್ನು ಸರಿಪಡಿಸಿ ಒಕ್ಕಲತನ ಲಾಭದಾಯಕ ಹೋರೆಯಾಗುವಂತೆ ನೋಡಿಕೊಳ್ಳಬೇಕಾಗಿದೆ. ಇವನ್ನೆಲ್ಲ ಮಂತ್ರಿ ಮಂಡಳದವರು ಕಾರ್ಯಕ್ಷಮತೆಯಿಂದ ಮಾಡುವರೆಂಬಲ್ಲಿ ಸಂದೇಹವಿಲ್ಲ. ಆದರೆ ಜನತೆಯೂ ತಾಳ್ಮೆಯಿಂದ ಇದ್ದು ಸರಕಾರದ ಯೋಜನೆಗಳಲ್ಲಿ ಸಹಾಯ ಮಾಡುತ್ತ ನಡೆಯಬೇಕಲ್ಲದೆ ಅಡ್ಡಿ ಅಡಚಣಿಗಳನ್ನುಂಟು ಮಾಡುವ ಇಲ್ಲವೆ ಬರಿ ಟೀಕೆ ಮಾಡುತ್ತ ಕೂಡ್ರುವ ಧೋರಣ ವಹಿಸತಕ್ಕದ್ದಲ್ಲೆಂದು ಹೇಳಬಯಸುತ್ತೇವೆ.

## ಲಂಚಗುಳಿತನ ನಿರ್ಮೂಲನ

ಕಳೆದ ೬॥ ವರ್ಷಗಳ ವರೆಗೆ ಹಿಂದುಸ್ತಾನದಲ್ಲಿ ಪ್ರಜರ ವಿಶ್ವಾಸಕ್ಕೆ ಪಾತ್ರವಿದ್ದ ಸರಕಾರವು ಆಡಳಿತಾಧಿಕಾರ ವಹಿಸಿರಲಿಲ್ಲ. ಹೊಣೆಗೆಟ್ಟ ಸಲಹೆಗಾರ ಸರಕಾರಗಳು ಹಿಂದುಸ್ತಾನದ ಆಪ್ರಾಂತಗಳಲ್ಲಿ ಆಡಳಿತೆ ನಡೆಸಿದ್ದವು. ಈ ಸಲಹೆಗಾರ ಸರಕಾರದ ಆಡಳಿತೆ ಪ್ರಜಾರಂಜಕವಾಗಿರದೆ ಪ್ರಜರನ್ನು ವಿವಿಧ ರೀತಿಯಿಂದ ಛಲಿಸುವುದರಲ್ಲಿ ಪರಿಣಮಿಸಿತ್ತೆಂಬುದು ಅನುಭವದ ಮಾತಾಗಿದೆ. ಯುದ್ಧದ ನೆವದಿಂದ ಪ್ರತಿಯೊಂದು ಪದಾರ್ಥದ ಮೇಲೆ ನಿಯಂತ್ರಣ ಹಾಕಲ್ಪಟ್ಟು ಜನತೆಗೆ ಅವು ಸಿಕ್ಕದಂತಾಗಿವೆ ಯುದ್ಧ ಮುಗಿದು ಹೋಗಿದ್ದರೂ ಸರಕಾರಗಳ ಕೊರತೆಯೇನೂ ಕಡಮೆ ಆಗಿಲ್ಲ. ಮತ್ತಷ್ಟು ಹೆಚ್ಚುತ್ತಲೆ ಇವೆ. ಈ ರೀತಿಯ ಪರಿಸ್ಥಿತಿಯ ಲಾಭ ಪಡೆದುಕೊಂಡು ಅಲ್ಲಲ್ಲಿನ ಅಧಿಕಾರಿಗಳು ಲಂಚಗಳಿತನಕ್ಕೆಳಸಿದ್ದು ಕಂಡುಬಂದಿದೆ. ಅವಶ್ಯಕ ಸರಕುಗಳ ಕೊರತೆ ವಿಶೇಷವಾದ್ದರಿಂದ ಹಲವಾರು ಜನರು ಲಂಚಕೊಡುವ ಧೋರಣವನ್ನಿಟ್ಟುಕೊಂಡಿದ್ದು ಉಂಟು. ಆದರೆ ಲಂಚ ಕೊಡುವವರು ಲಂಚ ತೆಗೆದುಕೊಳ್ಳುವವರಷ್ಟೇ ಅಪರಾಧಿಗಳು. ಕಾಯದೆಯಿಂದ ಹೀಗಿದ್ದರೂ ಮುಂಬಯಿ ಸರಕಾರದವರು ಈ ಲಂಚ ನಿರ್ಮೂಲ ಮಾಡುವ ಉದ್ದೇಶದಿಂದ ಜನತೆಗೆ ಸಹಾಯ ಮಾಡಲು ಬಿನ್ನವಿಸಿಕೊಂಡಿರುತ್ತಾರೆ. ಲಂಚದ ಸಂದರ್ಭಗಳನ್ನೆಲ್ಲ ತಿಳಿಸಿದರೆ ಅವುಗಳ ತಪಾಸ ಮಾಡುವದಲ್ಲದೆ ಯೋಗ್ಯ ಪರಿಹಾರವನ್ನು ಕೊಡಲಾಗುವದು. ಇಂಥ ಸಂಗತಿಗಳನ್ನು ತಿಳಿಸಿದವರಿಗೆ ಕಾಯದೆಯ ಸಂರಕ್ಷಣವನ್ನೆಲ್ಲ ಕೊಡುವದಾಗಿಯೂ ಅವರು ಸಾರಿದ್ದಾರೆ. ಹೀಗೆ ಜನ ಧೈರ್ಯದಿಂದ ಮುಂದೆ ಬಂದಹೊರತು ಇಂಥ ಕೆಟ್ಟ ಪ್ರಘಾತಗಳು ಹೋಗುವದಿಲ್ಲ. ಲಂಚದ ಪ್ರಕರ್ಣಗಳನ್ನೆಲ್ಲ ಸರಕಾರಕ್ಕೆ ತಿಳಿಸಬೇಕೆಂದು ಅಗ್ರಹಪಡಿಸುತ್ತೇವೆ.

## ಹಿಂದುಸ್ತಾನದ ಆಹಾರ ಪರಿಸ್ಥಿತಿ

ಹಿಂದುಸ್ತಾನದ ಆಹಾರ ಪರಿಸ್ಥಿತಿ ಹದಗೆಟ್ಟಿದೆ. ಹೊರಗಿನಿಂದ ಕಾಳು ಬರದಿದ್ದರೆ ಜನ ಉಪವಾಸ ಸಾಯಬೇಕಾಗುವುದು. ಇತ್ತೀಚಿಗೇನೊ ಕೆಲ ಭಾಗಗಳಲ್ಲಿ ಮಳೆಯಾಗಿದ್ದುಂಟು. ಆದರೆ ಮಳೆಯಾದ ಕೂಡಲೆ ಆಹಾರ ಪರಿಸ್ಥಿತಿ ಸುಧಾರಿಸಿದೆಂದು ಹೇಳುವುದು ಸರಿಯಲ್ಲ. ಅಮೇರಿಕೆಯ ಅಧ್ಯಕ್ಷ ಮತ್ತು ಒಕ್ಕಲತನ ಮಂತ್ರಿಗಳು ಈ ಬಗೆ ಅಪಪ್ರಚಾರ ನಡೆಸಿದ್ದನ್ನು ಅಮೇರಿಕನ್‌ರೆ ಖಂಡಿಸಿರುವರು. ಸಂ. ರಾಷ್ಟ್ರಗಳ ಪುನರ್ನಿಯೋಜನ ಸಮಿತಿಯ ಡೆ. ಡಾಯರೆಕ್ಟರ ಹೆಂಡ್ರಿಕ್‌ಸನ್‌ರು ಮೇಲಿನ ವಿಧಾನವನ್ನು ಖಂಡಿಸುತ್ತ ಹಿಂದುಸ್ತಾನಕ್ಕೆ ಆಹಾರ ಪದಾರ್ಥ ಕಳಿಸದಿದ್ದರೆ ೧-೧॥ ಕೋಟಿ ಜನ ಮರಣಹೊಂದುವರೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಹಿಂದುಸ್ತಾನಕ್ಕೆ ಕೂಡಲೆ ೪೦ ಲಕ್ಷ ಟನ್ ಧಾನ್ಯಗಳು ಅವಶ್ಯವಾಗಿ ದೊರೆಯಬೇಕಾಗಿದೆ. ಪಶ್ಚಿಮಗೋಲಾರ್ಧದಿಂದ ಧಾನ್ಯ ಹೋಗದಿದ್ದರೆ ಪರಿಸ್ಥಿತಿ ಅತ್ಯಂತ ಭೀಕರವಾಗುವದು. ಪರ್ಲಬಕ್‌ರೂ ಇದೇ ಮಾತನ್ನು ಹೇಳಿರುವರು. ಹಿಂದುಸ್ತಾನದ ಬರಗಾಲಕ್ಕೆ ಬ್ರಿಟಿಶ್‌ರೆ ಕಾರಣರಾದ್ದಾರೆಂಬುದು ಸಿದ್ಧ. ಈ ಪರಿಸ್ಥಿತಿಯಲ್ಲಿ ಹಿಂದುಸ್ತಾನದಲ್ಲಿ ಆಹಾರ ಕೊರತೆಯಾಗದಂತೆ ನೋಡಿಕೊಳ್ಳುವುದು ಅವರ ಹೊಣೆಯಾಗಿದೆ. ಅಮೇರಿಕೆಯ ಅಧ್ಯಕ್ಷ ಮತ್ತು ಒಕ್ಕಲತನ ಮಂತ್ರಿಗಳ ತಪ್ಪು ತಿಳಿವಳಿಕೆಯನ್ನು ಹೋಗಲಾಡಿಸಿ ಹಿಂದುಸ್ತಾನಕ್ಕೆ ಆಹಾರ ಪದಾರ್ಥಗಳನ್ನು ಕಳಿಸುವಂತೆ ಒತ್ತಾಯಪಡಿಸಬೇಕು. ರಶಿಯದ ಮುಖಾಂತರವಾಗಿಯೂ ಆಹಾರ ಪದಾರ್ಥಗಳನ್ನು ತರಿಸಬೇಕು. ಸದ್ಯದ ಪರಿಸ್ಥಿತಿಯಲ್ಲಿ ಸರಕಾರದವರು ಮೀನ, ಮೇಷ ಮಾಡುತ್ತ ವೇಳೆಗಳೆದರೆ ಲಕ್ಷಗಟ್ಲೆ ಜನ ಆಹಾರಾಭಾವದಿಂದ ಮರಣ ಹೊಂದಬಹುದೆಂದು ಬೇರೆ ಹೇಳಬೇಕಿಲ್ಲ.

## ನೇಕಾರರಿಗೆ ಸೂಚನೆ

ಹಿಂದುಸ್ತಾನ ಸರಕಾರದವರು ನೂಲಿನ ನಿಯಂತ್ರಣ ಮಾಡಿ ಆಯಾ ಪ್ರಾಂತಗಳಿಗಿಷ್ಟೆಂದು ಪ್ರಮಾಣ ಗೊತ್ತುಮಾಡಿರುವರಷ್ಟೆ. ಆ ಪ್ರಮಾಣಕ್ಕನುಸಾರವಾಗಿ ಜಿಲ್ಹಾಧಿಕಾರಿಗಳೆಡೆಗೆ ಇಂತಿಷ್ಟು ಗಂಟು ನೂಲು ಕಳಿಸುವರು. ಅವರು ಆಯಾ ಭಾಗದಲ್ಲಿಯ ನೇಕಾರರಿಗೆ ಆ ನೂಲು ಹಂಚುವರು. ಈ ಹಂಚಿಕೆಯಲ್ಲಿಯೂ ಎಲ್ಲರಿಗೂ ಸಮಾಧಾನವಾಗುವದು ಶಕ್ಯವಿಲ್ಲ. ಪರಿಸ್ಥಿತಿ ಹೀಗಿರುವದರಿಂದ ಅನೇಕ ನೇಕಾರರಿಗೆ ಕೆಲಸವಿಲ್ಲದಂತಾಗಿ ಅವರ ಮಗ್ಗಗಳು ನಡೆಯದೆ ಹಾಗೆಯೆ ಬಿದ್ದುದುಂಟು. ಈ ಬಗ್ಗೆ ಪೂರಯಿಕೆ ಮಂತ್ರಿಗಳು ಹುಬ್ಬಳ್ಳಿಗೆ ಬಂದಾಗ ನೇಕಾರರು ದೂರಿಕೊಂಡರು. ಅವರಾದರೂ ಇದೇ ಮಾತನ್ನು ಹೇಳಿದರು. ಕೇಂದ್ರ ಸರಕಾರದಿಂದ ಬಂದ ಪ್ರಮಾಣಕ್ಕನುಸಾರವಾಗಿಯೆ ನೂಲು ಹಂಚಲಾಗುವದೆಂದು ಹೇಳಿದರು. ಕೇಂದ್ರ ಸರಕಾರದಿಂದ ಹೆಚ್ಚು ನೂಲು ಆಯಾ ಪ್ರಾಂತಗಳಿಗೆ ಸಿಕ್ಕುವವರೆಗೆ ನೇಕಾರರಿಗೆ ಸಾಕಷ್ಟು ಸಿಕ್ಕುವುದು ಶಕ್ಯವಿಲ್ಲ. ಈ ಪರಿಸ್ಥಿತಿಯಲ್ಲಿ ನೇಕಾರರು ತಮ್ಮ ಧೋರಣವನ್ನು ಸ್ವಲ್ಪ ಬದಲು ಮಾಡಿ ಕೈನೂಲಿನ ಬಟ್ಟೆಗಳನ್ನು ನೇಯಲಿಕ್ಕೆ ಪ್ರಾರಂಭಿಸಬೇಕು. ಈಗ ಹೇಗಾದರೂ ಚರಕ ಸಂಘದವರು ನೇಕಾರರಿಗೆ ಜೀವನ ವೇತನವನ್ನು ಕೊಡುತಿರುವರು. ಗಿರಣಿ ನೂಲು ನೇಯುವುದರಿಂದ ಅವರಿಗೆ ಬರತಕ್ಕ ಕೂಲಿಗಿಂತ ಹೆಚ್ಚು ಕೂಲಿ ಖಾದಿ ನೇಯುವುದರಿಂದ ಸಿಕ್ಕುವುದು. ಹೀಗಿರುವಾಗ ನೇಕಾರರು ಖಾದಿ ನೇಯಲು ಇನ್ನಾದರೂ ಪ್ರಾರಂಭಿಸಬೇಕು. ಇದರಿಂದ ಅವರಿಗೆ ಉದ್ಯೋಗ ಸಿಕ್ಕುವುದಲ್ಲದೆ ಚರಕ ಸಂಘದಲ್ಲಿ ರಾಶಿರಾಶಿಯಾಗಿ ಬೀಳುತಿರುವ ನೂಲನ್ನು ನುರಿಸಿದಂತಾಗುವದು. ಸದ್ಯಕ್ಕಂತೂ ನಮ್ಮ ಬರಗಾಲ ಭಾಗದಲ್ಲಿ ಚರಕ ಸಂಘದವರು ಸರಕಾರದ ಸಹಾಯದಿಂದ ನೂಲು ತೆಗೆಸುವುದನ್ನು ದೊಡ್ಡ ಪ್ರಮಾಣದಲ್ಲಿ ಸಾಗಿಸಿದ್ದಾರೆ. ಆ ನೂಲು ಸಕಾಲದಲ್ಲಿ ನೇಯಲ್ಪಡದಿದ್ದರೆ ಹಾನಿಯಾಗುವ ಸಂಭವವುಂಟು. ಆದುದರಿಂದ ನೇಕಾರರು ಈ ನೂಲನ್ನು ತೆಗೆದುಕೊಂಡು ಖಾದಿ ನೇಯಬೇಕು. ಸುರತದಲ್ಲಿ ಈಗಾಗಲೆ ನೇಕಾರರು ಹೆಚ್ಚು ಪ್ರಮಾಣದಲ್ಲಿ ಖಾದಿ ನೇಯಲಿಕ್ಕೆ ಹತ್ತಿರುವರೆಂದು ಮಾನ್ಯ ದೇಸಾಯರು ಹುಬ್ಬಳ್ಳಿಗೆ ಬಂದಾಗ ಹೇಳಿದರು. ನಮ್ಮ ಕರ್ನಾಟಕದ ನೇಕಾರರೂ ಕೂಡಲೆ ಖಾದಿ ನೇಯುವ ಉಪಕ್ರಮ ಮಾಡಿ ಸ್ವಂತದ ಲಾಭ ಮಾಡಿಕೊಳ್ಳುವುದಲ್ಲದೆ ದೇಶಕಾರ್ಯವನ್ನು ಮಾಡಿದ ಶ್ರೇಯಸ್ಸನ್ನೂ ಪಡೆಯಬೇಕೆಂದು ಅಗ್ರಹ ಪಡಿಸುತ್ತೇವೆ.

## ಸರ್ ಗುರುರಾವ ಬೇವೂರ

ಇದೇ ೨೩ನೇ ತಾರೀಕಿಗೆ ಸರಕಾರಿ ಸೇವೆಯಿಂದ ನಿವೃತ್ತರಾದ ನಂತರ ಸರ್ ಗುರುರಾವ ಬೇವೂರ ಇವರು ತಾತಾ ಕಂಪನಿಯ ಡಾಯರೆಕ್ಟರರಾಗಬೇಕೆಂದು ಅವರಿಗೆ ಬಿನ್ನವಿಸಲಾಗಿದೆಂದು ತಿಳಿಯುತ್ತದೆ. ಸರ್ ಗುರುರಾಯರು ೩೩॥ ವರುಷಗಳ ದೀರ್ಘ ಸೇವೆಯಿಂದ ಇದೀಗ ನಿವೃತ್ತರಾಗುವರು. ಅವರು ಆಯ. ಸಿ. ಎಸ್. ರಾಗಿ ಬಂದ ನಂತರ ಡೆಪ್ಯುಟಿ ಕಲೆಕ್ಟರರಾಗಿ ಕೆಲಸ ಮಾಡಿ ಅನಂತರ ಪೋಷ್ಟ ಖಾತೆಗೆ ವರ್ಗಾಯಿಸಲ್ಪಟ್ಟರು. ಪೋಸ್ಟ ಮಾಸ್ಟರ ಜನರಲ್, ಡಾಯರೆಕ್ಟರ ಜನರಲ್, ಸೆಕ್ರೆಟರಿ ಮೊದಲಾದ ಸ್ಥಳಗಳಲ್ಲಿ ಕೆಲಸ ಮಾಡಿರುವರು. ಪೋಸ್ಟ ಖಾತೆಯಲ್ಲಿ ಅವರು ಬಹಳ ಸುಧಾರಣೆ ಮಾಡಿರುವರು. ಇತ್ತೀಚೆ ವಿಮಾನ ಸಾರಿಗೆ ಮೊದಲಾದವುಗಳಲ್ಲಿಯೂ ತಜ್ಞರಾಗಿರುವರು. ಹಿಂದುಸ್ತಾನ ಸರಕಾರದ ಪ್ರತಿನಿಧಿಗಳೆಂದು ಅವರು ಈ ವಿಷಯಕ್ಕೆ ಸಂಬಂಧಿಸಿದ ಪರಿಷತ್ತುಗಳಿಗೆ ಹೋಗಿ ಬಂದಿರುವರು. ಈ ರೀತಿ ಕಾರ್ಯಕ್ಷಮತೆಯಿಂದ ಸರಕಾರಕ್ಕೆ ಸೇವೆ ಸಲ್ಲಿಸಿದ ಇವರು ಗವರ್ನರರಾಗಿ ನಿವೃತ್ತರಾಗಬೇಕಿತ್ತು. ಆದರೆ ಅದೇಕೋ ಅವರಿಗೆ ಆ ಮಾಲೆ ಬೀಳಲಿಲ್ಲ. ಅದೇನೆ ಇದ್ದರೂ ಸರ್ ಗುರುರಾಯರು ನುರಿತ ಅಧಿಕಾರಿಗಳಿರುವರು. ಅವರೀಗ ತಾತಾ ಕಂಪನಿಯಲ್ಲಿ ಸೇರಿ ತಮ್ಮ ಜ್ಞಾನದ ಲಾಭ ಭಾರತದ ವಾಹನ ಸಾರಿಗೆಗಾಗಿ ಮಾಡಿಕೊಡಬೇಕೆಂದು ಸೂಚಿಸದಿರಲಾರೆವು. ಸರ್ ಗುರುರಾಯರು ಅಚ್ಚ ಕನ್ನಡಿಗರು ಬಾಗಿಲ ಕೋಟೆಯವರು. ಅವರು ಯಾವದೇ ಕಾರ್ಯ ಮಾಡಲಿ ಕರ್ನಾಟಕವನ್ನು ಮರೆಯದೆ ಅದರ ಸಾರ್ವಾಂಗಿಕ ಉನ್ನತಿಗಾಗಿ ಪ್ರಯತ್ನಿಸಬೇಕು. ಸರ್ ಗುರುರಾಯರು ಚಿರಾಯುಗಳಾಗಿ ತಮ್ಮ ಆಳವಾದ ಜ್ಞಾನದ ಲಾಭ ಭಾರತಮಾತೆಗೆ ಮಾಡಿಕೊಡಲೆಂದು ಹಾರಯಿಸುತ್ತೇವೆ.

## ಶ್ರೀನಿವಾಸ ಶಾಸ್ತ್ರಿಗಳ ನಿಧನ

ಭಾರತದ ಪ್ರಸಿದ್ಧ ವ್ಯಕ್ತಿಗಳಲ್ಲೊಬ್ಬರಾದ ನೇಕನಾಮದಾರ ಶ್ರೀನಿವಾಸ ಶಾಸ್ತ್ರಿಗಳು ೧೭ ನೇ ತಾರೀಕು ರಾತ್ರಿ ೧೦—೪೫ ಗಂಟೆಗೆ ವಯಸ್ಸಿನ ೭೭ನೇ ವರುಷದಲ್ಲಿ ಮದ್ರಾಸದಲ್ಲಿ ನಿಧನಹೊಂದಿದರೆಂದು ತಿಳಿಸಲು ವಿಷಾದಿಸುತ್ತೇವೆ. ಶಾಲಾಮಾಸ್ತರರೆಂದು ತಮ್ಮ ಜೀವನವನ್ನು ಪ್ರಾರಂಭಿಸಿ ಶಾಸ್ತ್ರಿಗಳು ಭಾರತ ಸೇವಕ ಸಮಾಜವನ್ನು ಸೇರಿ ವಿವಿಧ ರೀತಿಯಿಂದ ಹಿಂದುಸ್ತಾನಕ್ಕೆ ಸೇವೆ ಸಲ್ಲಿಸಿದರು. ಪ್ರಾಂತಿಕ ಮತ್ತು ಕೇಂದ್ರ ಶಾಸನ ಸಭೆಗಳ ಸದಸ್ಯರೆಂದು ಅವರು ಕಾರ್ಯ ಮಾಡಿದರು. ಸಾಮ್ರಾಜ್ಯ ಪರಿಷತ್ತು, ರಾಷ್ಟ್ರಸಂಘ ಮೊದಲಾದವುಗಳಿಗೆ ಪ್ರತಿನಿಧಿಗಳಾಗಿ ಹೋಗಿದ್ದರು. ಪ್ರಿವಿ ಕೌನ್ಸಿಲ್ಲಿನ ಸದಸ್ಯರೂ ಅಫ್ರಿಕೆಯಲ್ಲಿ ಹಿಂದೀಯರ ಹಾಯ ಕಮೀಸನರರೂ ಆಗಿದ್ದರು. ಅಣ್ಣಾಮಲೆ ವಿಶ್ವವಿದ್ಯಾಲಯದ ಉಪಕುಲಪತಿಗಳೂ ಆಗಿದ್ದರು. ಈ ರೀತಿ ಭಾರತದ ವಿವಿಧ ಕ್ಷೇತ್ರಗಳಲ್ಲಿ ಕಾರ್ಯ ಮಾಡಿ ಗಣ್ಯವ್ಯಕ್ತಿಗಳೆಂದು ಖ್ಯಾತಿಹೊಂದಿದ ನಾಮದಾರ ಶಾಸ್ತ್ರಿಗಳು ಪರಂಧಾಮವನ್ನೈದಿದರು. ಅವರು ಕಾಂಗ್ರೆಸ್ಸಿಗರಾಗಿರದಿದ್ದರೂ ರಾಷ್ಟ್ರೀಯ ವೃತ್ತಿಯವರಾಗಿದ್ದರು. ಸರಕಾರದ ದಬ್ಬಾಳಿಕೆಯನ್ನು ಅವರು ಖಂಡತುಂಡಾಗಿ ಟೀಕಿಸುತ್ತಿದ್ದರು. ಹಿಂದುಸ್ತಾನದ ಬಿಕ್ಕಟ್ಟನ್ನು ಬಿಡಿಸಲು ಕಾಂಗ್ರೆಸ್ಸಿನ ಗೂಡ ಒಡಂಬಡಿಕೆ ಮಾಡಿಕೊಳ್ಳಲು ಅವರು ಸರಕಾರಕ್ಕೆ ಅನೇಕ ಸಲ ಒತ್ತಾಯ ಪಡಿಸಿದರು. ಒಳ್ಳೆ ವಾಗ್ಮಿಗಳೂ ನುರಿತ ಲೇಖಕರೂ ಆಗಿದ್ದರು. ಹಿಂದುಸ್ತಾನದ ಸ್ವಾತಂತ್ರ್ಯಕ್ಕಾಗಿ ತಳಮಳಿಸುವವರಲ್ಲೊಬ್ಬರಾಗಿದ್ದರು. ಮಹಾತ್ಮಾ ಗಾಂಧಿಯವರು ಶಾಸ್ತ್ರಿಗಳ ಬಗ್ಗೆ ತೆಗೆದ ಉದ್ಗಾರಗಳನ್ನು ನೋಡಿದರೆ ಅವರೆಷ್ಟೊಂದು ಮಹತ್ವದ ಸ್ಥಾನವನ್ನು ಪಡೆದಿದ್ದರೆಂಬುದು ಸ್ಪಷ್ಟವಾಗುವದು. 'ಶಾಸ್ತ್ರಿಗಳ ಮರಣದಿಂದ ಹಿಂದುಸ್ತಾನ ಒಬ್ಬ ಸುಪುತ್ರನನ್ನು ಕಳೆದುಕೊಂಡಿತಷ್ಟೆ ಅಲ್ಲ ಜಗತ್ತು ಒಬ್ಬ ಹಿಂದೀ ಸುಪುತ್ರನನ್ನು ಕಳೆದಾಕೊಂಡಿತು. ಹಿಂದುಸ್ತಾನದ ಅತ್ಯಂತಿಕ ಪ್ರೇಮಿಗಳವರು. ಅವರ ದೇಹ ಸುಟ್ಟು ಬೂದಿಯಾಗಿ ಹೋಗಿದ್ದರೂ ಶಾಸ್ತ್ರಿಗಳು ಜೀವಂತ ಇರುವರು' ಎಂದು ಗಾಂಧೀಜಿಯವರು ಅಭಿಪ್ರಾಯಪಟ್ಟಿರುವರು. ಹಿಂದೀ ಸಮಸ್ಯೆಬಗ್ಗೆ ಸದ್ಯಕ್ಕೆ ನಡೆದ ವಿಚಾರ ವಿನಿಮಯದ ಫಲ ನಿಷ್ಪತ್ತಿಯಾಗಿ ಹಿಂದುಸ್ತಾನಕ್ಕೆ ಸ್ವಾತಂತ್ರ್ಯ ದೊರತುದನ್ನು ನೋಡಿದ ಬಳಿಕ ಶಾಸ್ತ್ರಿಗಳು ಇಹಲೋಕದ ಯಾತ್ರೆ ಮುಗಿಸಬೇಕಾಗಿತ್ತು. ಆದರೆ ಮೃತ್ಯು ಯಾರ ಕೈಯಲ್ಲಿದೆ? ಭಾರತೀಯ ತರುಣರು ಶಾಸ್ತ್ರಿಗಳಂತೆ ಅತ್ಯಂತ ನಿಷ್ಠೆಯಿಂದ ರಾಷ್ಟ್ರಸೇವೆ ಮಾಡಬೇಕು. ಅವರ ಆತ್ಮಕ್ಕೆ ಶಾಂತಿಯನ್ನೀಯಬೇಕೆಂದು ಕೇಳಿಕೊಳ್ಳುತ್ತೇವೆ.

# ಜಿನ್ನಾರ ಪಾಕಿಸ್ತಾನಕ್ಕೆ ಮಂತ್ರಿತ್ರಯರ ಅಸಮ್ಮತಿ?

## ಕಾಂಗ್ರೆಸ್ಸು ದುರ್ಬಲ ಕೇಂದ್ರವುಳ್ಳ ನಾಡಕೂಟಕ್ಕೆ ಒಪ್ಪುವದೆ?
## ಅಝಾದರ ಯೋಜನೆಗೆ ಕಾಂಗ್ರೆಸ್ ಪ್ರಮುಖರ ವಿರೋಧ?

ಬ್ರಿಟಿಶ ಮಂತ್ರಿತ್ರಯರು ಹಿಂದೀ ಮುಂದಾಳುಗಳೊಡನೆ ನಡೆಸಿದ "ಎರಡನೆ ಸುತ್ತು" ಚರ್ಚೆ ಇದೀಗ ಮುಗಿದು ಮಂತ್ರಿವರ್ಯರು ವಿಶ್ರಾಂತಿಗಾಗಿ ಕಾಶ್ಮೀರಕ್ಕೆ ಹೋಗಿರುವರು. ಅವರು ತಾ. ೨೪ ಕ್ಕೆ ಮರಳುವವರೆಗಿನ ಅವಧಿಯಲ್ಲಿ ದಿಲ್ಲಿಯಲ್ಲಿ ಹಿಂದೀ ರಾಜಕಾರಣ ಪಟುಗಳಲ್ಲಿ ನಡೆಯುವ ಚರ್ಚೆ ಮತ್ತು ಅವುಗಳ ಫಲದ ಮೇಲೆಯೆ ಹಿಂದುಸ್ತಾನ ಭವಿತವ್ಯ ನಿಂತಿದೆಯೆಂದು ತಿಳಿದು ಬಂದಿದೆ.

ಕಮ್ಯುನಿಸ್ಟ ಪಕ್ಷ, ಹಿಂದೂ ಮಹಾಸಭೆ, ಆಂಗ್ಲೋ ಇಂಡಿಯನ್ನರನ್ನೊಳಗೊಂಡು ಹಿಂದುಸ್ತಾನದ ಎಲ್ಲ ರಾಜಕೀಯ ಅಭಿಪ್ರಾಯದವರನ್ನೂ ಬ್ರಿಟಿಶ ಮಂತ್ರಿತ್ರಯರು ಕಂಡುದಾಗಿದೆ. ಕೊನೆಯಲ್ಲಿ ಅವರು ಜಿನ್ನಾ ಸಾಹೇಬರನ್ನೂ ಕಾಂಗ್ರೆಸ್ ಅಧ್ಯಕ್ಷರನ್ನೂ ಕರೆಸಿಕೊಂಡು ಬೇರೆಬೇರೆಯಾಗಿ ಅವರಿಗೆ ಕೆಲವೊಂದು ಸೂಚನೆಗಳನ್ನು ಮಾಡಿದ್ದಾರೆಂದು ತಿಳಿದು ಬಂದಿದೆ. ಈ ಸೂಚನೆಗಳನ್ನು ಉಭಯ ಮುಖಂಡರೂ ತಮ್ಮ ಕಾರ್ಯಕಾರಿ ಸಮಿತಿಗಳಿಗೆ ತಿಳಿಸಿದ್ದರೂ ಇನ್ನೂ ಯಾವ ನಿರ್ಣಯವೂ ಆಗಿಲ್ಲ. ಲೀಗ ಕಾರ್ಯಕಾರಿ ಸಭೆ ತಾ. ೨೫ ಕ್ಕೆ ಜರುಗಲಿರುವದರಿಂದ ಅದಕ್ಕೆ ಮುಂಚಿತವಾಗಿ ಜಿನ್ನಾ ಸಾಹೇಬರು ಯಾವುದೊಂದು ನಿರ್ಣಯಕ್ಕೆ ಬರುವದಿಲ್ಲೆಂದು ಹೇಳಬೇಕು. ಕಾಂಗ್ರೆಸ್ ಕಾರ್ಯಕಾರಿ ಸಮಿತಿಯಾದರೂ ಅಧ್ಯಕ್ಷ ಅಝಾದರು ತಮ್ಮ ಮಸೂರಿ ಪ್ರವಾಸ ಮುಗಿಸಿಕೊಂಡು ಬಂದ ನಂತರ ತಾ. ೨೫ ಕ್ಕೆ ಜರುಗಲಿದೆಯೆಂಬುದರಿಂದ ಅದರ ನಂತರವೇ ಕಾಂಗ್ರೆಸ್ಸಾದರೂ ಕೊನೆಯ ನಿರ್ಣಯ ಮಾಡುವದು.

### ಎಲ್ಲ ಕಣ್ಣು ಕಟ್ಟು?

ಬ್ರಿಟಿಶ ಮಂತ್ರಿಗಳು ಈ ವರೆಗೆ ಮುಂದಾಳುಗಳೊಡನೆ ನಡೆಸಿದ ಮಾತುಕತೆ, ವಿಚಾರವಿನಿಮಯವೆಲ್ಲ ಬರಿ ಕಣ್ಣು ಕಟ್ಟು; ನಿಜವಾಗಿ ಅವರು ಮೊದಲೇ ನಿರ್ದಿಷ್ಟವಾದೊಂದು ಯೋಜನೆಯೊಡನೆಯೇ ಬಂದಿರುವರೆಂಬ ಸಂದೇಹ ವ್ಯಕ್ತಗೊಳಿಸಲ್ಪಡುತ್ತಿದೆ. ಶಂಕಾಶೀಲರಾದ ರಾಜಕಾರಣಿಗಳು, ಹಿಂದೆ ಮಾಂಟೆಗ್ಯೂ ಅವರು ಹಿಂದುಸ್ತಾನದಲ್ಲಿ ನಡೆಸಿದ ಕಣ್ಣುಕಟ್ಟಿನ ವಿಚಾರಣೆಯನ್ನು ಈ ಸಂಬಂಧದಲ್ಲಿ ಬೊಟ್ಟು ಮಾಡಿ ತೋರಿಸುತ್ತಾರೆ. ಅವರು ಮೊದಲೇ ಸಿದ್ಧವಾಗಿದ್ದ ಯೋಜನೆಯನ್ನೇ ಜಾರಿಗೆ ತಂದರು. ಈಗಲಾದರೂ ಮಂತ್ರಿತ್ರಯರು ನಡೆಸಿದ ಮಾತುಕತೆಗಳು, ವಿವಿಧ ಪಕ್ಷಗಳನ್ನು ತಡವಿ ಬ್ರಿಟನಿಗೆ ಅತ್ಯಂತ ಅನುಕೂಲವಾದ ವ್ಯಾಪಾರಿ ಮತ್ತು ಇತರ ಸವಲತ್ತುಗಳನ್ನು ದೊರಕಿಸಿಕೊಳ್ಳುವ ಸಲುವಾಗಿ ಹೂಡಿದ ಆಟವೆಂದು ಈ ವರ್ಗಗಳ ನಂಬಿಕೆ. ಆದುದರಿಂದ ಲೀಗ್ ವರ್ಗಗಳ ಗಡುಸು ಮಾತುಗಳಾಗಲಿ ಕಾಂಗ್ರೆಸ್ಸಿಗರ ಹೇಳಿಕೆಗಳಾಗಲಿ ಅವರನ್ನು ಬಹಳವಾಗಿ ಕದಲಿಸಿಲ್ಲವಂತೆ

### ಜಿನ್ನಾರ ಪಾಕಿಸ್ತಾನಕ್ಕೆ ಬೆಂಬಲವಿಲ್ಲ?

ಕೊನೆಯ ಬಾರಿ ಮಂತ್ರಿತ್ರಯರನ್ನು ಭೆಟ್ಟಿ ಮಾಡಿ ಬಂದ ನಂತರ ಜಿನ್ನಾ ಸಾಹೇಬರು ಎಂದಿಗಿಂತಲೂ "ಪ್ರಸನ್ನಚಿತ್ತ"ರಾಗಿದ್ದರೆಂದೂ ಅಝಾದರು "ಚಿಂತಾಕ್ರಾಂತ"ರಾಗಿದ್ದರೆಂದೂ ಕೆಲ ಮುಖಲಕ್ಷಣ ಶಾಸ್ತ್ರಜ್ಞ ಪತ್ರಿಕೋದ್ಯೋಗಿಗಳ ಹೇಳಿಕೆ. ಆದರೆ ಈ ಮುಖಲಕ್ಷಣ ಶಾಸ್ತ್ರಿಗಳ ಊಹೆಗಳೆಲ್ಲ ಎಷ್ಟು ತಪ್ಪಾಗಿರಬಲ್ಲವೆಂಬುದು ಗಾಂಧಿ-ಜಿನ್ನಾ ಮಾತುಕತೆಯ ಹೊತ್ತಿಗೂ ಸಿಮ್ಲಾ ಪರಿಷತ್ತಿನ ಸಮಯಕ್ಕೂ ಸ್ಫುಟವಾಗಿತ್ತು. ದಿಲ್ಲಿಯಲ್ಲಿ ಬಲ್ಲ ವರ್ಗಗಳ ನಿಶ್ಚಿತಾಭಿಪ್ರಾಯವೇನಿರುವದೆಂದರೆ, ಜಿನ್ನಾ ಸಾಹೇಬರ "ಛಾಪಿನ" ಪಾಕಿಸ್ತಾನಕ್ಕೆ ಮಂತ್ರಿತ್ರಯರ ಸ್ಫುಟವಾದ ವಿರೋಧ ಕಂಡು ಬಂದಿದೆ. ಪ್ರತ್ಯೇಕ ಮತ್ತು ಸಾರ್ವಭೌಮ ಪಾಕಿಸ್ತಾನವನ್ನು ಬಿಟ್ಟು ಬೇರಾವುದನ್ನಾದರೂ ಬೇಡಲು ಅವರು ಜಿನ್ನಾರಿಗೆ ಕೇಳಿಕೊಂಡರಂತೆ. ತಾವು ಅಧಿಕಾರ ಬಿಟ್ಟು ಕೊಡುವದಿದ್ದರೆ ಒಂದೇ ಕೇಂದ್ರಕ್ಕೆ ಹೊರತು ಎರಡು ಅಥವಾ ಹೆಚ್ಚು ಕೇಂದ್ರಗಳಿಗೆ ಬಿಟ್ಟು ಕೊಡುವಂತಿಲ್ಲವೆಂದು ಅವರು ಹೇಳಿದರು. ಪಾಕಿಸ್ತಾನವನ್ನು ಜಿನ್ನಾರು ಕೇಳುವಂತೆ ಸ್ಥಾಪಿಸಿದಲ್ಲಿ ಹಿಂದುಸ್ತಾನದ ಸಂರಕ್ಷಣೆಗೆ ಅದು ವಿಘಾತಕವಾಗುವದೆಂದು ಮಂತ್ರಿಗಳಿಗೆ ಮನವರಿಕೆಯಾಗಿದೆ. ಆದುದರಿಂದ ಅವರು ಜಿನ್ನಾ ಸಾಹೇಬರಿಗೆ ಈಗಿರುವ ಪ್ರಾಂತಗಳನ್ನಿಟ್ಟುಕೊಳ್ಳುವವಾದರೆ ಹಿಂದೀ ಸಂಯುಕ್ತ ಘಟನೆಯಲ್ಲಿ ಸ್ವಾಯತ್ತ ಪಾಕಿಸ್ತಾನವನ್ನು ಅಥವಾ ಸಂಪೂರ್ಣ ಸ್ವಾತಂತ್ರ್ಯ ಬೇಕಿದ್ದರೆ ಕೇವಲ ಮುಸ್ಲಿಂ ಬಹುಸಂಖ್ಯಾಕರುಳ್ಳ ಪ್ರದೇಶಗಳನ್ನಷ್ಟೇ ಪ್ರತ್ಯೇಕಿಸಿ (ಅಥವಾ ರಾಜಾಜಿಯವರ ಸೂಚನೆಯಂತೆ ಮುಸ್ಲಿಂ ಬಹುಸಂಖ್ಯಾಕ ಪ್ರದೇಶಗಳನ್ನು ಜಿಲ್ಹಾವಾರ ಗುರುತಿಸಿ) ಅವುಗಳ ಮೇಲಷ್ಟೇ ಪ್ರಭುತ್ವವನ್ನು ಕೊಡುವುದಾಗಿ ಹೇಳಿರುವರು. ಎರಡನೆಯದನ್ನು ಆರಿಸುವದಿದ್ದರೆ, ಆಗ ಕೆಲವೊಂದು ವಿಷಯದಲ್ಲಿ ಹಿಂದೂ ಹಿಂದುಸ್ತಾನದೊಡನೆ ಒಪ್ಪಂದ ಮಾಡಿಕೊಳ್ಳುವ ಭರವಸೆಯನ್ನು ಪಾಕಿಸ್ತಾನವು ಕೊಡಬೇಕು. ಈ ವಿಷಯದಲ್ಲ ತಮ್ಮ ಕೊನೆಯ ಉತ್ತರವನ್ನು ೨೫ ನೇ ತಾರೀಖಿಗೆ ಕೊಡುವುದಾಗಿ ಜಿನ್ನಾ ಸಾಹೇಬರು ಹೇಳಿದ್ದರೂ ಇವೆರಡರಲ್ಲೊಂದನ್ನೂ ಮುಸ್ಲಿಂಲೀಗು ಅಂಗೀಕರಿಸುವ ಸ್ಥಿತಿಯಲ್ಲಿದ್ದಂತೆ ಕಾಣುವದಿಲ್ಲ. ಮೊದಲನೆಯದನ್ನು ಅಂಗೀಕರಿಸಿದರೆ ಮುಸ್ಲಿಂ ಪ್ರಾಂತಗಳು ಪ್ರಬಲ ಕೇಂದ್ರಕ್ಕೆ ವಿಧೇಯವಾಗಿ ನಡೆಯಬೇಕಾದೀತು. ಈ ವಾರ ಆಬುಲ ಕಲಮ ಅಝಾದರು ಮುಸ್ಲಿಮರ ಹಿತದೃಷ್ಟಿಯಿಂದಲೇ ಪಾಕಿಸ್ತಾನ ಅಪಾಯಕರವಾದುದೆಂದು ಪತ್ರಿಕಾ ಪರಿಷತ್ತಿನಲ್ಲಿ ಹೇಳಿದ್ದರೆ ನವಾಬಜಾದಾ ಲಿಯಾಕತ ಅಲ್ಲಿಖಾನರು ಸಿಟ್ಟಿಗೆದ್ದು ಉತ್ತರ ಕೊಟ್ಟು "ಹಿಂದುಗಳ ಭಯದಿಂದ ಮಾತ್ರವಲ್ಲ ಮುಸ್ಲಿಂ ಜನಾಂಗಕ್ಕೆ ತನ್ನ ಧ್ಯೇಯಕ್ಕನುಸರಿಸಿ ತನ್ನನ್ನು ಸ್ವತಂತ್ರವಾಗಿ ರೂಪಿಸಿಕೊಳ್ಳಲವಕಾಶಬೇಕೆಂದೇ ಪಾಕಿಸ್ತಾನವನ್ನು ಬೇಡಲಾಗುತ್ತದೆ" ಎಂಬುದಾಗಿ ಹೇಳಿದ್ದನ್ನು ನೋಡಿದರೆ ಪ್ರಬಲ ಕೇಂದ್ರವನ್ನು ಅವರು ಮನ್ನಿಸುವದಶಾಧ್ಯವೆಂದು ತೋರುತ್ತದೆ. ಎರಡನೆಯ ದಾರಿಯನ್ನು ಆಯ್ದರೆ ಪಂಜಾಬ ಬಂಗಾಲ ಆಸಾಮುಗಳ ದೊಡ್ಡ ದೊಡ್ಡ ತುಂಡುಗಳನ್ನು ಪಾಕಿಸ್ತಾನ ಹಿಂದುಸ್ತಾನಕ್ಕೆ ಬಿಟ್ಟುಕೊಡಬೇಕಾಗುವದು. ಅದು ಪಾಕಿಸ್ತಾನವನ್ನು ಆರ್ಥಿಕ ಮತ್ತು ಸಂರಕ್ಷಣ ದೃಷ್ಟಿಯಿಂದ ಅಶಾಧ್ಯವನ್ನಾಗಿಯೇ ಮಾಡುವದು. ಆದ ಕಾರಣ ಅದೂ ಲೀಗಕ್ಕೆ ಮಾನ್ಯವಾಗುವ ಸಂಭವವಿಲ್ಲ. ಹೀಗೆ ತಾ. ೨೫ ಕ್ಕೆ ಲೀಗ ವರಿಷ್ಠರು ಸೇರಿದಾಗ ನಕಾರಾತ್ಮಕ ಉತ್ತರವೇ ಮಂತ್ರಿವರ್ಯರಿಗೆ ದೊರೆಯುವ ಸಂಭವವಿದೆ. ಮುಸ್ಲಿಂ ಜನಾಭಿಪ್ರಾಯದ ಬೆಂಬಲ ತಮಗಿರುವದೆಂಬ ಧೈರ್ಯದಿಂದ ಜಿನ್ನಾ ಸಾಹೇಬರು ಮಂತ್ರಿಗಳ ತೀಕ್ಷ್ಣ ಒತ್ತಾಯವನ್ನೂ ಲಕ್ಷಿಸದಿರಬಹುದು. ಕಳೆದ ವಾರ ಜರುಗಿದ ಮುಸ್ಲಿಂ ಲೀಗ ಶಾಸನ ಸಭಾ ಸದಸ್ಯರ ಪರಿಷತ್ತಿನಲ್ಲಿ ಸರ್ ಫಿರೋಜಖಾನ ನೂನರು "ಹಿಂದುಗಳು ಮತ್ತು ಬ್ರಿಟೀರು ನಮಗೆ ಪಾಕಿಸ್ತಾನ ಕೊಡದಿದ್ದರೆ ರಶಿಯಾ ಕೊಡುವದು; ಕಮ್ಯುನಿಷ್ಟ ತತ್ವ ಮುಸ್ಲಿಂ ವಿಚಾರಧಾರೆಗೆ ಅನುಕೂಲವಾದುದು" ಎಂದು ಹೇಳಿದುದು ಬ್ರಿಟಶರಿಗೆ ತೋರಿಸಿದ ಬೆದರು ಗುಂಡಾಗಿದ್ದರೆ, ಹಿಂದೂಗಳಿಗೆ "ಪಾಕಿಸ್ತಾನ ಕೊಡದಿದ್ದರೆ ಚೆಂಗಸಖಾನನ್ನು ನಾಚಿಸುವ ಕಾರ್ಯವನ್ನು ತೋರುವೆವು" ಎಂದು ಹೆದರಿಸಿರುವರು. ಈ ವಿಜಯೋನ್ಮಾದದ ದ್ಯೋತಕವೇ ಆಗಿದೆ ಹಿಂದೂಗಳ ಅನೇಕ ದೋಷಗಳನ್ನೆಣಿಸಿ, ಆ ಪರಿಷತ್ತಿನ ಮುಖ್ಯ ಗೊತ್ತುವಳಿಯಲ್ಲಿ, ಹಿಂದುಗಳೂ ಮುಸ್ಲಿಮರೂ ಒಂದಾಗುವದು ಸಾಧ್ಯವೇ ಇಲ್ಲವೆಂದು ಸಾಧಿಸಲಾಗಿದೆ.

### ಅಝಾದರ ಪರಿಹಾರೋಪಾಯ?

ಜಿನ್ನಾ ಸಾಹೇಬರು ಮಂತ್ರಿತ್ರಯರ ಕೊನೆಯ ಭೆಟ್ಟಿಯನ್ನು ತೆಗೆದುಕೊಳ್ಳುವದಕ್ಕೆ ಮೊದಲು ಕಾಂಗ್ರೆಸ್ ಅಧ್ಯಕ್ಷ ಮೌಲಾನಾ ಅಝಾದರು ಪತ್ರಿಕಾ ಪರಿಷತ್ತಿನಲ್ಲಿ ಪಾಕಿಸ್ತಾನದಿಂದ ಹಿಂದೀ ರಾಷ್ಟ್ರೀಯತೆಯ ದೃಷ್ಟಿಯಿಂದಲೂ ಮುಸ್ಲಿಂ ಹಿತದೃಷ್ಟಿಯಿಂದಲೂ ಪೃಥಕ್ಕರಿಸಿ ನೋಡಿದರೆ ಮುಸ್ಲಿಮರಿಗೆ ಅದರಿಂದ ಅಪಾರ ಹಾನಿಯಾಗುವದೆಂದೂ ೩॥ ಕೋಟಿ ಮುಸ್ಲಿಮರು ಹಿಂದುಗಳ ನಡುವೆ ದುರ್ಬಲ ಅಲ್ಪಸಂಖ್ಯಾಕರಾಗಿ ಉಳಿಯುವಾಗ ಪಾಕಿಸ್ತಾನದಲ್ಲಿರುವ ಹಿಂದುಗಳು ಎಲ್ಲೆಡೆಯಲ್ಲಿಯೂ ಪ್ರಬಲ ಅಲ್ಪಸಂಖ್ಯಾಕರಾಗಿರುವುದರಿಂದ ಮುಸ್ಲಿಮರಿಗೆ ಒಟ್ಟಿನ ಮೇಲೆ ಹಾನಿಯಾಗುವದೆಂದೂ ಸಾರಿದರು. ಮುಂದುವರಿಯುತ್ತ ಅವರು ಹಿಂದೂ ಬಹುಸಂಖ್ಯಾಕರ ಭಯವೇ ಮುಸ್ಲಿಮರನ್ನು ಪಾಕಿಸ್ತಾನದತ್ತ ಸೆಳೆಯುತ್ತಿದ್ದರೆ, ಅದಕ್ಕೆ "ಪಾಕಿಸ್ತಾನದ ಎಲ್ಲ ಗುಣಗಳಿಂದ ಕೂಡಿದ ಆದರೆ ಅದರ ದೋಷವೊಂದೂ ಇಲ್ಲದ" ಯೋಜನೆಯೊಂದನ್ನು ಕಾಂಗ್ರೆಸು ಒಪ್ಪುವಂತೆ ತಾವು ಮಾಡಿರುವದಾಗಿ ಹೇಳಿದರು. ಮುಸ್ಲಿಮರು ಬಹುಸಂಖ್ಯಾಕರಾಗಿ ಉಳ್ಳ ಪ್ರದೇಶಗಳಿಗೆ ಪರಮಾವಧಿ ಸ್ವಾಯತ್ತತೆಯನ್ನು ಕೊಡುವ ಸಂಯುಕ್ತ ರಾಜ್ಯಘಟನೆಯನ್ನು ಕಾಂಗ್ರೆಸ್ಸು ಕೊಡಲೊಪ್ಪುವದು. ಈ ಪ್ರಾಂತಗಳ ಆಡಳಿತೆಯಲ್ಲಿ ಕೇಂದ್ರ ಕೈಹಾಕುವದು ಸಾಧ್ಯವಿಲ್ಲದಂತೆ ವ್ಯವಸ್ಥೆ ಮಾಡಲಾಗುವದು ಎಂದು ಅವರು ಹೇಳಿ ಹಿಂದೀ ಸಮಸ್ಯೆಗೆ ಕಾಂಗ್ರೆಸ್ಸಿನ ಈ ಪರಿಹಾರೋಪಾಯವೇ ಅತ್ಯುತ್ತಮವಾದುದೆಂದರು. ಈ ಬಗೆಯ ರಾಜ್ಯಘಟನೆಯಲ್ಲಿ ಕೇಂದ್ರ ದುರ್ಬಲವಾಗುವದೇ ನಿಶ್ಚಯವಿರುವದರಿಂದ ಕಾಂಗ್ರೆಸ ಕಾರ್ಯಕಾರಿ ಸಮಿತಿಯಲ್ಲಿ ಅದಕ್ಕೆ ಪ್ರಬಲ ವಿರೋಧ ಬಂತೆಂದು ತಿಳಿದು ಬಂದಿದೆ. ನಾಡಕೂಟ ಅಥವಾ ಕಾನ್‌ಫೆಡರೇಶನ ಎಂಬ ಈ ರಾಜ್ಯಪದ್ಧತಿಯಲ್ಲಿ ಕೆಲ ಸ್ವತಂತ್ರ ರಾಜ್ಯಗಳು ಸೇರಿ ಸಂರಕ್ಷಣೆ, ವಿದೇಶ ವಿಚಾರ ಮತ್ತು ಇತರ ಕೆಲವೇ ಅಧಿಕಾರಗಳನ್ನು ಕೇಂದ್ರವೊಂದಕ್ಕೆ ಕೊಡುವುದಾಗುತ್ತದೆ. ಅಮೇರಿಕೆ ಮೊದಲಾದ ಕೆಲ ದೇಶಗಳಲ್ಲಿ ಇದರ ಪ್ರಯೋಗವಾಗಿ ಅದು ಸರಿಯಾಗಿ ಕೆಲಸ ಮಾಡದಿದ್ದುದರಿಂದ ಅದನು ಬಿಟ್ಟು ಪ್ರಬಲ ಕೇಂದ್ರದ ವ್ಯವಸ್ಥೆಯನ್ನೇ ಕೈಕೊಳ್ಳಲಾಯಿತು. ಹೀಗಿದ್ದರೂ ಈಚೆಗೆ ಕೆಲ ದಿನಗಳಿಂದ ಹಿಂದೀ ಸಮಸ್ಯೆಗೆ ಈ ದುರ್ಬಲ ಕೇಂದ್ರದ "ನಾಡಕೂಟ"ವೇ ಔಷಧವೆಂಬಂತೆ ಮಾತು ನಡೆದಿವೆ. ಲೀಗ ಕಾರ್ಯದರ್ಶಿ ನವಾಬ ಜಾದಾ ಅವರು ಕಾಂಗ್ರೆಸ್ ಅಧ್ಯಕ್ಷರ "ಪರಮಾವಧಿ ಸ್ವಾಯತ್ತತೆ"ಯ ಕೊಡುಗೆಯನ್ನು ತಿರಸ್ಕಾರಪೂರ್ವಕವಾಗಿ ನಿರಾಕರಿಸಿದರು. ಆ ನಂತರ ನಾಲ್ಕು ಖಂಡಗಳ "ನಾಡಕೂಟ"ವನ್ನು ಸ್ಥಾಪಿಸುವ ಹೊಸದೊಂದು ಯೋಜನೆಗೆ ಕಾಂಗ್ರೆಸ್ ಅಧ್ಯಕ್ಷರು ಸಮ್ಮತಿಸಿದರೆಂದು ಗುಜುಗುಜು ಹಬ್ಬಿದೆ. ಹಿಂದುಸ್ತಾನದ್ದೊಂದು ಸಂಯುಕ್ತ ಘಟನೆ, ಪಾಕಿಸ್ತಾನದ್ದೊಂದು, ಮುಸ್ಲಿಂ ಸಂಸ್ಥಾನಗಳದೊಂದು, ಹಿಂದೂ ಸಂಸ್ಥಾನಗಳದೊಂದು ಹೀಗೆ ನಾಲ್ಕು ಬೇರೆ ಬೇರೆ ಸಂಯುಕ್ತ ರಾಜ್ಯಗಳು ಸೇರಿ ಒಂದು ಕೇಂದ್ರ ಸಂಸ್ಥೆಯ ಮೂಲಕ ಸಡಿಲಾಗಿ ಸಂಯೋಜನೆಗೊಳ್ಳಬೇಕು. ಈ ಕೇಂದ್ರದಲ್ಲಿ ಪ್ರತ್ಯೇಕ ಶಾಸನಸಭೆಯಿರುವಂತಿಲ್ಲ. ಯುಕ್ತರಾಷ್ಟ್ರ ಸಂಘದ ಭದ್ರತಾ ಮಂಡಲದಂತೆ ಈ ಸಂಸ್ಥೆಯ ಸ್ವರೂಪವಿರಬೇಕು ಎಂಬ ಸೂಚನೆಗೆ ಅಧ್ಯಕ್ಷ ಅಝಾದರು ಗಾಂಧೀಜಿಯ ಆಶೀರ್ವಾದವನ್ನು ಕೂಡ ಗಳಿಸಿದರೆಂದೂ ಆದರೆ ಸರದಾರ ಪಟೇಲರ ಮುಂದಾಳ್ತನದಲ್ಲಿ ಕಾರ್ಯ ಸಮಿತಿಯ ಹಲ ಸದಸ್ಯರು ಈ ಯೋಜನೆಗೆ ಭಯಂಕರ ವಿರೋಧವೊಡ್ಡಿದ್ದರಿಂದ ಅಝಾದರು ನಿರುಪಾಯರಾದರೆಂದೂ ಹೇಳಲಾಗಿದೆ. "ನಾಡಕೂಟ" ಪದ್ಧತಿಯಲ್ಲಿ ಕೇಂದ್ರಕ್ಕೆ ಯಾವ ಮಹತ್ವದ ಅಧಿಕಾರವೂ ಇಲ್ಲದೆ, ಶಾಸನ ಸಭೆಯೂ ಇಲ್ಲದಿರುವದರಿಂದ ಆ ಪದ್ಧತಿಯನ್ನನುಸರಿಸಿದರೆ ಹಿಂದುಸ್ತಾನ ದುರ್ಬಲ ರಾಷ್ಟ್ರವಾಗುವದರಲ್ಲಿ ಸಂದೇಹವಿಲ್ಲ. ಹೀಗಿರುತ್ತ ಹಿಂದುಸ್ತಾನ ಪಾಕಿಸ್ತಾನ, ಹಿಂದೂ ಸಂಸ್ಥಾನ, ಮುಸ್ಲಿಮ ಸಂಸ್ಥಾನ ಎಂದು ವಿಂಗಡಿಸುವದರಿಂದ ಕೇಂದ್ರ ಬಡಿವಾಟದ ಕೇಂದ್ರವಾಗುವ ಸಂಭವವೇ ಹೆಚ್ಚು. "ನಾಡಕೂಟ"ದ ಯಾವ ಯೋಜನೆಯನ್ನೂ ಕಾಂಗ್ರೆಸ್ ಕಾರ್ಯಕಾರಿ ಮಂಡಲ ವಿಚಾರ ಮಾಡಿದ್ದಿಲ್ಲವೆಂದು ಗೊತ್ತಿದ್ದಲ್ಲದೆ ಕೃತವಾಗಿ ಸಾರಲಾಗಿದ್ದರೂ ಅದರ ಮೇಲೆ ಗೌಪ್ಯ ಚರ್ಚೆಯಾಗಿದ್ದೇ ನಿಜವೆಂದು ರಾಜಕೀಯ ವರ್ಗಗಳು ನಂಬಿವೆ.

### ನರೇಂದ್ರರಿಗೆ ಸುಸಂದರ್ಭ

ಈ ಬಿಕ್ಕಟ್ಟಿನಿಂದ ನರೇಂದ್ರರೇ ಎಲ್ಲರಿಗಿಂತ ಹೆಚ್ಚು ಪ್ರಯೋಜನ ಪಡೆಯುವರೆಂದು ಹೇಳಬಹುದಾಗಿದೆ. ಕಾಂಗ್ರೆಸ, ಲೀಗುಗಳು ಹೀಗೆ ಸಂಧಾನಕ್ಕೊಲ್ಲದ ಸ್ಥಿತಿಯಲ್ಲಿರುವದರಿಂದ ತಮ್ಮ ಪ್ರಜೆಗಳನ್ನು ದುರ್ಲಕ್ಷಿಸಿ ನರೇಂದ್ರರು ತಮ್ಮ ಸ್ಥಾನಗಳನ್ನು ಭದ್ರಪಡಿಸಿಕೊಳ್ಳಬಲ್ಲವರಾಗುವರು. ಭೋಪಾಲ ನವಾಬರು ಈ ಬಗ್ಗೆ ನರೇಂದ್ರರು ಮುಸ್ಲಿಂ ಲೀಗಿಗೆ ಕೃತಜ್ಞರಾಗಿರಬೇಕೆಂದೂ ಲೀಗ ಅಲ್ಲದೆ ಹೋಗಿದ್ದರೆ ಕಾಂಗ್ರೆಸ ತಮ್ಮನ್ನು ಸರ್ವಥಾ ಲಕ್ಷಿಸುತ್ತಿದ್ದಿಲ್ಲವೆಂದೂ ಹೇಳಿದರೆಂದು ಸುದ್ದಿಯುಂಟಾಗಿದೆ.

### ಒತ್ತಾಯದ ನಿರ್ಣಯ ಹೇರಲಾಗುವದೆ?

ಬ್ರಿಟಿಶ ಮಂತ್ರಿತ್ರಯರು ಹಿಂದೀ ಪ್ರಶ್ನೆಯನ್ನು ತೀರ್ಮಾನಿಸಿಯೇ ಬರಬೇಕು. ತೀರ್ಮಾನಿಸದೆ ಹಿಂದೆ ಬರಕೂಡದೆಂದು ಬ್ರಿಟಿಶ ಜನತೆಯೂ ಮಂತ್ರಿಮಂಡಲವೂ ಆಜ್ಞಾಪಿಸಿದೆಯೆಂದು ಹೇಳಲಾಗಿದೆ. ಕಾನ್ಸರ್ವೇಟಿವ್ ಪಕ್ಷದವರು ಹಿಂದುಸ್ತಾನದ ವಿಭಜನೆಗೆ ಬದ್ಧ ವಿರೋಧಿಗಳಾಗಿರುವರೆಂದೂ ಈ ವಿಷಯದಲ್ಲಿ ಬ್ರಿಟಿಶ ಸರಕಾರ ನಿರ್ಣಯವನ್ನು ಹೇರಿದರೆ ಅದಕ್ಕೆ ಬೆಂಬಲವೀಯಲು ಅದು ಸಿದ್ಧವಿದೆಯೆಂದೂ ನಂಬಲಾಗಿದೆ. ಮುಂಬರುವ ಘಟನೆಯನ್ನು ಕುರಿತು ಕಾಂಗ್ರೆಸ್-ಲೀಗುಗಳಲ್ಲಿ ಒಪ್ಪಂದವಾಗದಿದ್ದರೆ ಮಂತ್ರಿವರ್ಯರು ತಮ್ಮ ನಿರ್ಣಯವನ್ನು ಹೇರುವರೆಂದೂ ಆ ನಿರ್ಣಯವೇನೆಂಬುದು ಅವರಿಗೆ ಈಗಾಗಲೆ ಗೊತ್ತಿದೆಯೆಂದೂ ಪ್ರಬಲವಾದ ನಂಬಿಕೆಯುಂಟಾಗಿದೆ. ಆದರೆ ಯಾವುದೊಂದು ನಿರ್ಣಯವನ್ನು ಇಂಗ್ಲಂಡು ಹೇರುವದಕ್ಕೆ ಕಾಂಗ್ರೆಸ್ಸು ವಿರೋಧಮಾಡುವದೆಂದೂ ಒಂದು ವೇಳೆ ಹೇರಿದರೆ ಈ ವಿಷಯವನ್ನು ಯುಕ್ತರಾಷ್ಟ್ರಗಳ ಮುಂದೆ ತರಲು ಅದು ಪ್ರಯತ್ನಿಸಬಹುದೆಂದೂ ಹೇಳಲಾಗಿದೆ.

---

ಕರಾಚಿ ನಗರ ಸಭೆ ಚುನಾವಣೆಗೆ, ಕೊಳ್ಳುವವರು ಹಾಗು ನೌಕಾಗಾರರ ಸಂಘದಿಂದ ಹುರಿಯಾಳಾಗಿ ನಿಂತ ಅಖಂಡ ಹತ್ತು ವರ್ಷ ಮೇಯರರಾಗಿದ್ದ ಜಮಶೇಡಜಿ ಮೆಹತಾ ಇವರು ಪರಾಭವ ಹೊಂದಿದ್ದು ಕಾಂಗ್ರೆಸ್ಸಿನ ಉಮೇದ್ವಾರರು ೧೫ ಮತ ಹೆಚ್ಚು ದೊರಕಿಸಿ ಆರಿಸಿಬಂದಿದ್ದಾರೆ. ಜಮಶೇಡಜಿಯವರು ಕಾಂಗ್ರೆಸ್ ಪ್ರತಿಜ್ಞೆಗೆ ಸಹಿಮಾಡಲು ಹಾಗು ಕಾಂಗ್ರೆಸ ಪಕ್ಷದ ಶಿಸ್ತಿನಂತೆ ನಡೆಯಲು ನಿರಾಕರಿಸಿದ್ದರಿಂದ ಅವರಿಗೆ ಪ್ರತಿಸ್ಪರ್ಧಿಯನ್ನು ನಿಲ್ಲಿಸಲಾಗಿತ್ತು.

---


## ಹೊರಬಿದ್ದಿದೆ

**ಹಾರ್ಮೋನಿಯಂ ಮತ್ತು ಸಂಗೀತಬೋಧಿನಿ**

ಜೂನಿಯರ್ ಸಂಗೀತಕಲಾ ಪರೀಕ್ಷೆಯ ಪಾಠ ವಿಷಯಗಳಿಗನುಸಾರವಾಗಿ ಪರಿಶೋಧಿಸಿ ಬರೆದಿದೆ ಸ್ವರಾವಳಿ, ಅಲಂಕಾರ, ಗೀತ, ಸ್ವರಜತಿ ವರ್ಣಗಳು ತೆಲಗು ಕೃತಿಗಳು, ಕನ್ನಡ ಹರಿದಾಸರ ಕೀರ್ತನೆಗಳು ಅಧುನಿಕ ಕನ್ನಡ ಕವಿಗಳ ಭಾವಗೀತೆಗಳು ಸ್ವರಚಿಹ್ನ ಸಹಿತಇವೆ.

ಬೆಲೆ ರೂ ೧-೪-೦ ಟಪಾಲು ಖರ್ಚು ೦-೬-೦

ಎಚ್. ಎನ್. ರಾವ್ ಬ್ರದರ್ಸ್
ಚಿಕ್ಕಪೇಟೆ, ಬೆಂಗಳೂರ ಸಿಟಿ

# ಅಂತರ್ ರಾಷ್ಟ್ರೀಯ

## ಇರಾಣದ ಪ್ರಶ್ನೆ

ಭದ್ರತಾ ಮಂಡಲ ವಿಚಿತ್ರ ನ್ಯಾಯಾಸ್ಥಾನವಾಗಿ ರೂಪುಗೊಂಡಿದೆ. ವಾದಿಯಾದವನು ಪ್ರಕರಣವನ್ನು ಹಿಂತೆಗೆದುಕೊಂಡರೆ ಆ ಮೇಲೆ ಆ ಪ್ರಕರಣವನ್ನು ಕಡತದಿಂದ ಕಿತ್ತಿ ಹಾಕುವದು ನ್ಯಾಯಾಸ್ಥಾನಗಳ ರೂಢಿ. ಆದರೆ ಭದ್ರತಾ ಮಂಡಲದ ಧಾರಣೆ ಇರಾಣ ಸರಕಾರ ರಶಿಯಾದ ವಿರುದ್ಧ ಮಂಡಿಸಿದ ದೂರನ್ನು ಅದು ಹಿಂತೆಗೆದುಕೊಂಡರೂ ಭದ್ರತಾ ಮಂಡಲದ ಅಂಗ್ಲೋ-ಅಮೇರಿಕನ್ ಕೂಟ ಆ ಪ್ರಶ್ನೆಯನ್ನು ಇನ್ನೂ ಮಂಡಲದ ಕಾರ್ಯಕ್ರಮದಲ್ಲಿ ನಿಲ್ಲಿಸಿಕೊಳ್ಳುವ ಹಟ ತೊಟ್ಟಿದೆ. ಸೋವಿಯೆಟ್ ಪ್ರತಿನಿಧಿ ಗ್ರೋಮಿಕೋ ಒತ್ತಾಯಪಡಿಸಿದ: ಸೋವಿಯೆಟ್ ಮತ್ತು ಇರಾಣ ಸರಕಾರಗಳ ನಡುವೆ ಒಪ್ಪಂದವಾಗಿ ಮೇ ೬ ನೇ ತಾರೀಖಿನೊಳಗೆ ಎಲ್ಲ ಸೋವಿಯಟ್ ಪಡೆಗಳನ್ನು ಅನಿರ್ಬಂಧವಾಗಿ ಇರಾಣದಿಂದ ಹೊರಗೆ ತೆಗೆದುಕೊಳ್ಳುವದಾಗಿ ರಶಿಯಾ ಒಪ್ಪಿಕೊಂಡ ನಂತರ ಈ ಪ್ರಶ್ನೆಯನ್ನು ಯುಕ್ತರಾಷ್ಟ್ರ ಭದ್ರತಾಮಂಡಲದ ಕಾರ್ಯಕ್ರಮದಲ್ಲಿ ಇನ್ನೂ ಇರಿಸಿಕೊಳ್ಳುವದರಲ್ಲಿ ಔಚಿತ್ಯವಿಲ್ಲ. ಅದು "ಯುಕ್ತರಾಷ್ಟ್ರ ಸನದಿಗೆ ವಿರುದ್ಧವಾದುದು" ಎಂದು. ಆದರೆ ಇದರ ಬಗ್ಗೆ ಇರಾಣ ಸರಕಾರ ಏನೂ ಹೇಳಿಲ್ಲವೆಂದು ಗ್ರೋಮಿಕೋಗೆ ಎದುರು ಹೇಳಿದ್ದಾಯಿತು. ಆ ಮೇಲೆ ಇರಾಣವೇ ತನ್ನ ಪ್ರತಿನಿಧಿಯ ಮೂಲಕ ಅಧಿಕೃತವಾಗಿ ಭದ್ರತಾ ಮಂಡಲದ ಮುಂದೆ ಒಂದು ಹೇಳಿಕೆ ಕೊಟ್ಟು "ರಶಿಯಾದ ವಚನದಲ್ಲಿ ಇರಾಣಕ್ಕೆ ವಿಶ್ವಾಸವಿದೆ. ಆದುದರಿಂದ ತನ್ನ ದೂರನ್ನು ಹಿಂತೆಗೆದುಕೊಳ್ಳಲಿಚ್ಛಿಸುತ್ತದೆ" ಎಂದು ತಿಳಿಸಿತು. ಆದರೂ ಅಂಗ್ಲೋ-ಅಮೇರಿಕನ್ ಪ್ರತಿನಿಧಿಗಳು ಮೇ ೬ ನೆ ತಾರೀಖಿನ—ಅಂದರೆ ರಶಿಯಾ ಇರಾಣದಿಂದ ಪೂರ್ಣ ಹೊರ ಪ್ರಯಣ ಮಾಡಿ ಮುಗಿಸುವ—ವರೆಗೂ ಈ ಪ್ರಶ್ನೆ ಕಾರ್ಯಕ್ರಮದಲ್ಲಿ ಇರಬೇಕೆಂದು ಹಟ ತೊಟ್ಟಿದ್ದಾರೆ. ಅರ್ಥಾತ್ ರಶಿಯಾದ ವಚನದಲ್ಲಿ ಇರಾಣಕ್ಕಿರುವ ವಿಶ್ವಾಸ ಭದ್ರತಾ ಮಂಡಲದ ಬಹುಸಂಖ್ಯಾಕರಿಗಿಲ್ಲ. ಅವಧಿಯೊಳಗೆ ರಶ್ಯಿಯನ್ ಪಡೆಗಳು ಇರಾಣದಿಂದ ಹೊರಬೀಳದಿದ್ದರೆ ಒಡನೆ ಅದನ್ನು ಚರ್ಚೆಗೆ ತೆಗೆದುಕೊಳ್ಳುವ ಆತುರ ಇರಾಣಕ್ಕಿಲ್ಲದಿದ್ದರೂ ಅಂಗ್ಲೋ-ಅಮೇರಿಕನ್ನರಿಗುಂಟು. ಇದನ್ನು ನೋಡಿಯೇ ಗ್ರೋಮಿಕೋ ಹೇಳಿದ್ದು: ಅಂಗ್ಲೋ-ಅಮೇರಿಕನ್ನರಿಗೆ ರಶಿಯಾ ಇರಾಣಗಳೊಳಗಿನ ಭಿನ್ನಾಭಿಪ್ರಾಯಗಳು ಶಾಂತರೀತಿಯಿಂದ ಬಗೆಹರಿಯುವದು ಬೇಕಾಗಿಲ್ಲದೆ ಇರಾಣವನ್ನು ಬರಿ ಸೋವಿಯೆಟ್ ವಿರುದ್ಧ ಪ್ರಚಾರಕ್ಕೆ ಒಂದು "ಪಣ"ವಾಗಿ ಮಾರ್ಪಡಿಸುವ ಅಭಿಲಾಷೆಯಿದೆ, ಎಂದು. ಅಂತೂ ಈ ವಿಷಯವನ್ನು ಕುರಿತು ವರದಿ ಮಾಡಲು ಭದ್ರತಾ ಮಂಡಲದ ತಜ್ಞ ಸಮಿತಿಗೆ ಕೇಳಿಕೊಳ್ಳಲಾಗಿದೆ. ಅದೇನೆನ್ನುವದೋ ನೋಡಬೇಕು.

## ಆ ಎಣ್ಣೆ

ಒಪ್ಪಿಗೆ ದಿಂದಲೋ ಒತ್ತಾಯದಿಂದಲೋ ರಶಿಯಾ ಇರಾಣದಿಂದ ತೆಗೆದುಕೊಂಡ ಎಣ್ಣೆ ಸವಲತ್ತುಗಳೇ ಅಂಗ್ಲೋ-ಅಮೇರಿಕನ್ನರ ಹೊಟ್ಟೆಕೋಪಿನ ಕಾರಣವೆಂಬಲ್ಲಿ ಸಂದೇಹವೇ ಇಲ್ಲ. ವಾಯುವ್ಯ ಇರಾಣದ ಎಣ್ಣೆ ಸಂಪತ್ತಿಯನ್ನು ಶೋಧಿಸಲು ರಶಿಯಾ-ಇರಾಣ ಒಪ್ಪಂದದನ್ವಯ ಸ್ಥಾಪಿಸಲ್ಪಡುವ ಎಣ್ಣೆ ಕಂಪನಿಯಲ್ಲಿ ನೂರಕ್ಕೆ ೪೯ ಪಾಲು ಇರಾಣಕ್ಕಿರುವದರಿಂದ ಹೊರಟ ಎಣ್ಣೆಯಲ್ಲಿ ಅರೆವಾಸಿ ಅವಕ್ಕೆ ದೊರೆಯುವದಿದ್ದು ಅದನ್ನು ಬೇಕಾದಂತೆ ಮಾರುವ ಹಕ್ಕಿರುವದು ನಿಜ. ಆದರೆ ಇರಾಣದ ಸಂಪರ್ಕ ಸೌಕರ್ಯದ ಸ್ಥಿತಿಯಲ್ಲಿ ಆ ಎಣ್ಣೆಯನ್ನು ಉತ್ತರ ಇರಾಣದಿಂದ ಬೇರೆಡೆಗೆ ಒಯ್ಯುವದು ಕಷ್ಟಸಾಧ್ಯವಾಗುವದು. ಹೀಗೆ ಇರಾಣ ಸರಕಾರ ಆ ಎಣ್ಣೆಯನ್ನೂ ರಶಿಯನ್ನರಿಗೇ ಮಾರಬೇಕಾಗುತ್ತದೆ. ಹೀಗೆ ಇಂಗ್ಲೀಷರ ಎಣ್ಣೆಯ ಪೂರೈಕೆ ಕಡಿಮೆಯಾಗದಿದ್ದರೂ ರಶಿಯನ್ನರದು ಅಗಾಧವಾಗಿ ಬೆಳೆಯುವದೆಂದು ಬ್ರಿಟಿಶರಿಗೆ ಗಾಬರಿ. ಆದರೆ ಅವರು ಏನೂ ಮಾಡುವ ಸ್ಥಿತಿಯಲ್ಲಿಲ್ಲ. ಹೊಸದಾಗಿ ಆರಿಸಲ್ಪಡುವ ಇರಾಣ ಪಾರ್ಲಿಮೆಂಟು ಪ್ರಾರಂಭವಾದೊಡನೆ, ಇನ್ನೇಳು ತಿಂಗಳ ಅವಧಿಯೊಳಗೆ, ಈ ಎಣ್ಣೆ ಒಪ್ಪಂದಕ್ಕೆ ಅದರ ಸಮ್ಮತಿ ಮುದ್ರೆ ದೊರಕಿಕೊಡಲು ಸುಲ್ತಾನೆ ಮಂತ್ರಿಮಂಡಲಬದ್ಧವಾಗಿದೆ. ಅಂಗ್ಲೋ—ಅಮೇರಿಕನ್ ತಂತ್ರದಿಂದ ಸುಲ್ತಾನೆ ಸರಕಾರವನ್ನೇ ತಲೆಕೆಳಗು ಮಾಡುವ ಪ್ರಯತ್ನ ನಡೆದರೆ ಆಗ ಸ್ಟಾಲಿನ್ನರು ಮತ್ತೆ ಗುದುಮುರಿಗೆ ಪ್ರಯೋಗವನ್ನು ತೋರಿಸಲು ಹಿಂದೆ ಮುಂದೆ ನೋಡಲಿಕ್ಕಿಲ್ಲ.

## ಶಾಂತಿ ಪರಿಷತ್ತು

ಇದೇ ಮೇ ತಿಂಗಳಲ್ಲಿ ಜರಗಬೇಕೆಂದಿರುವ ಯುರೋಪಿಯನ್ ಶಾಂತಿ ಪರಿಷತ್ತು ಜರಗಲೆ ಸಾಧ್ಯವಿಲ್ಲ, ಚತುರಾಷ್ಟ್ರಗಳಲ್ಲಿರುವ ಬಾಯಿಗೊಡಿಸಬಾರದ ಬಿರುಕು ಎಷ್ಟು ಪ್ರಬಲವಾಗಿದೆಯೆಂದರೆ ಬೇರೆ ಬೇರೆ ವಿಜಯಿ ರಾಷ್ಟ್ರಗಳು ಬೇರೆ ಬೇರೆಯಾಗಿ ಸೋತ ರಾಷ್ಟ್ರಗಳೊಡನೆ ಒಪ್ಪಂದ ಮಾಡಿಕೊಳ್ಳುವ ಪ್ರಸಂಗ ಬರಬಹುದೆಂದು ವಿದೇಶ ಮಂತ್ರಿಗಳ ಪ್ಯಾರಿಸ ಸಭೆಯ ದಿನ ಸಮೀಪಿಸಿದಂತೆ ಭಯಪಡಲಾಗುತ್ತಿದೆ. (ಶಾಂತಿ ಪರಿಷತ್ತಿನ ಮುಂದಿರುವ ತೊಡಕುಗಳಿಗೆ ಕಳೆದ ವಾರದ "ಕರ್ಮವೀರ" ನೋಡಿರಿ) ಲಿಥುವೇನಿಯಾ, ಲಾಟ್ವಿಯಾ, ಇಸ್ಟೋನಿಯಾಗಳು ರಶಿಯಾದೊಳಗೆ ಸಮಾವೇಶ ಹೊಂದಿದ್ದನ್ನು ಮನ್ನಿಸಲು ಅಂಗ್ಲೋ—ಅಮೇರಿಕನ್ನರು ತೋರುತ್ತಿರುವ ಸಂಶಯವೊಂದೇ ಅಲ್ಲದೆ ಸೋವಿಯೆಟ್ ರುಮೇನಿಯನ್ ಗಡಿ ನಿರ್ಣಯದ ತಂಟೆಯೊಂದು ಹೊಸದಾಗಿ ಉದ್ಭವಿಸಿದೆ. ಡಾನ್ಯೂಬ್ ನದಿ ಕಪ್ಪು ಸಮುದ್ರಕ್ಕೆ ಸಂಗಮವಾಗುವಲ್ಲಿ ಕೆಲ ದ್ವೀಪಗಳ ಮೇಲೂ ಅಲ್ಲಿಯ ನೌಕಾ ವ್ಯವಹಾರದ ಮೇಲೂ ಅಧಿಕಾರವನ್ನು ರಶಿಯಾ ಬೇಡುತ್ತಿದೆಯೆಂದು ತಿಳಿದುಬಂದಿದೆ. ೧೯೪೦ ರಲ್ಲಿ ಸೋವಿಯೆಟ್ ರುಮೇನಿಯಾ ಒಪ್ಪಂದದನ್ವಯ ರಶಿಯಾಕ್ಕೆ ಹೋದ ಭಾಗಕ್ಕಿಂತಲೂ ಮಿಕ್ಕಿದ ಪ್ರಾದೇಶಿಕ ಬೇಡಿಕೆ ಇದು. ಇದಕ್ಕೆ ಅಂಗ್ಲೋ ಅಮೇರಿಕನ್ನರ ವಿರೋಧವಿದೆ. ಈ ತೊಡಕುಗಳ ನಡವೆ ಶಾಂತಿಪರಿಷತ್ತಿನ ಸಾಧ್ಯಾಸಾಧ್ಯತೆ ಸಂಶಯಗ್ರಸ್ತವಾಗಿದ್ದರೂ ರಶಿಯನ್ ಅಧಿಕೃತ ವರ್ಗಗಳು ಶಾಂತಿ ಪರಿಷತ್ತು ಕೂಡಿಯೇ ಕೂಡುವುದೆಂದು ಸಾರುತ್ತಿರುವುದರಲ್ಲಿ ಒಂದು ಆಶಾಕಿರಣ ಕಾಣುತ್ತಿದೆ.

## ರಾಷ್ಟ್ರಸಂಘದ ಅಂತ್ಯವಿಧಿ

ಕಳೆದ ಯುದ್ಧಾನಂತರದಲ್ಲಿ "ಹೊಸ ಯುದ್ಧಗಳನ್ನು ಅಸಾಧ್ಯವಾಗಿ ಮಾಡುವ ಸಲುವಾಗಿ" ಸ್ಥಾಪಿತವಾದ ರಾಷ್ಟ್ರಸಂಘದ ಅಂತ್ಯವಿಧಿ ಇದೀಗ ಜಿನೀವಾದಲ್ಲಿ ಪ್ರಾರಂಭವಾಗಿದೆ. ಅದರ ಉತ್ತರಾಧಿಕಾರಿಯಾದ ಹೊಸ ಯುಕ್ತ ರಾಷ್ಟ್ರ ಸಂಘದ ಸ್ಥಾಪನೆಯಾಗಿ ಅದು ಇಂದಿನ ಅಂತರ್‌ರಾಷ್ಟ್ರೀಯ ಕೇಶಾಕೇಶಿ ಮುಷ್ಟಾಮುಷ್ಟಿಯ ವೇದಿಕೆಯಾಗಿರುವುದಾಗಿ ಹಳೆಯ ರಾಷ್ಟ್ರ ಸಂಘದ ಅಸ್ತಿತ್ವಕ್ಕೆ ಯಾವ ಅವಶ್ಯಕತೆಯೂ ನ್ಯಾಯವೂ ಇಲ್ಲದಿರುವುದರಿಂದ ಅದನ್ನು "ದಿವಾಳಿ" ತೆಗೆಯುವ ನಿರ್ಣಯ ಕಳೆದವಾರದ ಅದರ ಸಭೆಯಲ್ಲಿ ಆಯಿತು. "ಅಂತರ್ ರಾಷ್ಟ್ರೀಯ ಹುಡುಗರ ಚರ್ಚಾಕೂಟ"ವೆಂಬ ಅಡ್ಡಹೆಸರು ಬಿದ್ದಿದ್ದ ಈ ಸಂಘದ ಚರಮ ಭಾಷಣ ಮಾಡಿ ಕಣ್ಣೀರು ಸುರಿಸಿದ ಸದಸ್ಯರು ಹಲವರು. "ಇದು ರಾಷ್ಟ್ರಸಂಘದ ತಪ್ಪಲ್ಲ. ಅದರ ಸದಸ್ಯರು ಅದರ ನಿರ್ಣಯಕ್ಕೆ ಬದ್ಧರಾಗಲಪೇಕ್ಷಿಸದಿದ್ದುದೇ ತಪ್ಪು" ಎಂದು ಕೆಲವರೆಂದರು. ಈ ದುರ್ದೈವಿ ಸಂಘ ಶಾಂತಿಯನ್ನು ರಕ್ಷಿಸಲಾರದಿದ್ದರೂ ಹಲವು ವರದಿಗಳನ್ನು ಪ್ರಸಿದ್ಧಿಸಿ ಪ್ರಸಿದ್ಧವಾಗಿದೆ. ಅದರ ಅಂತ್ಯಸಂಸ್ಕಾರ ಮುಗಿಸಲು ಒಂದು ದಿವಾಳಿ ಸಮಿತಿಯು ನಿರ್ಮಿತವಾಗಿದೆ. ಅದು ಸಂಘದ ಆಸ್ತಿಪಾಸ್ತಿಗಳನ್ನು ಶೇಖರಿಸಿ ಉಳಿದು ಬಳಿದುದನ್ನು ಯುಕ್ತ ರಾಷ್ಟ್ರಸಂಘಕ್ಕೆ ಒಪ್ಪಿಸಿಬಿಡಲಾಗುವದು. ರಾಷ್ಟ್ರ ಸಂಘ ಕಾಲವಾಯಿತು, ಅದು ಆಚಂದ್ರಾರ್ಕ ಬಾಳಲಿ!

## ಚೆವಿನ್ನರೂ ಅವರ ಸಾಮ್ರಾಜ್ಯವೂ

ಬ್ರಿಟಿಶ ಸಾಮ್ರಾಜ್ಯದ ಜಾಂಬವ ಮಟ್ಟಿಗೆ ಬ್ರಿಟಿಶ ವಿದೇಶಮಂತ್ರಿ "ಕೂಲಿಕಾರ" ಬೆವಿನ್ನರು ಸಂಪ್ರದಾಯಪ್ರಿಯ ಚರ್ಚಿಲ್ಲರ ಸುಧಾರಿಸಿದ ಹೊಸ ಸಂಸ್ಕರಣವೇ ಸರಿ. ಲಂಡನ್ ರತ್ನಪಡಿ ವ್ಯಾಪಾರಿಗಳ ಸಂಘದಲ್ಲಿ ಅವರಿಗಿತ್ತ ಔತಣ ಕೂಟವೊಂದರಲ್ಲಿ ಅವರು "ಸಾಮ್ರಾಜ್ಯದ ಹೊಣೆಗಾರಿಕೆ" ಯನ್ನು ಕುರಿತು ಮಾತಾಡಿದರು. "ನೀವೊಂದು ಸಾಮ್ರಾಜ್ಯವಾಗಿದ್ದರೆ ಆ ಸಾಮ್ರಾಜ್ಯದಲ್ಲಿರುವ ಪ್ರತಿಯೊಂದು ವ್ಯಕ್ತಿಯ ಹೊಣೆಗಾರಿಕೆಯನ್ನು ನೀವು ಹೊರಬೇಕು. ಇಲ್ಲದಿದ್ದರೆ ಸಾಮ್ರಾಜ್ಯವೆಂದು ಕರೆಸಿಕೊಳ್ಳುವ ಅಧಿಕಾರ ನಿಮಗಿಲ್ಲ" ಎಂದರವರು. ಆ ಸಾಮ್ರಾಜ್ಯದಲ್ಲಿ ೫೦—೬೦ ಲಕ್ಷ ಜನರು ಉಪವಾಸದ ಸಮಸಮೀಪದ ಮಟ್ಟದಲ್ಲಿ ಬಾಳುತಿದ್ದಾರೆಂದು ಅವರು ಹೇಳಿದರು. ಬ್ರಿಟಿಶ ಗೃಹಿಣಿಯವರು ಆಹಾರ ಕಡಿತಕ್ಕೆ ಬೇಸರಗೊಳ್ಳಬಾರದೆಂದು ಹೇಳಿ ಸಾಮ್ರಾಜ್ಯದಲ್ಲಿರುವ ಇತರ ಗೃಹಿಣಿಯವರ ಕಡೆಗೆ ಅವರು ಬೊಟ್ಟು ಮಾಡಿದರು. ಬಿಳಿ, ಅರಿಸಿಣ, ಕಪ್ಪು ಎಂಬ ಭೇದ ಮಾಡದೆ ಎಲ್ಲ ಜನಾಂಗಗಳ ಜೀವನದ ಮಟ್ಟವನ್ನು ಏರಿಸುವದರಲ್ಲಿಯೇ ಬ್ರಿಟಿಶ ಸಾಮ್ರಾಜ್ಯದ ಭವಿತವ್ಯ ಅಡಕವಾಗಿದೆ. ಬೆವಿನ್ನರಿಗೆ ಬ್ರಿಟಿಶ ಸಾಮ್ರಾಜ್ಯದ ಉಜ್ವಲ ಭವಿತವ್ಯವನ್ನು ಕುರಿತು ಯಾವುದೇ ಸಂದೇಹವಿದ್ದಿಲ್ಲ. ಏನೇ ಬಂದರೂ ಬ್ರಿಟಿಶ ಸಾಮ್ರಾಜ್ಯದ ಘಟಕಗಳು ಒಂದಕ್ಕೊಂದು ಗಟ್ಟಿಯಾಗಿ ಅಂಟಿಕೊಳ್ಳುವವೆಂದು ಅವರು ಎದೆತಟ್ಟಿ ಭವಿಷ್ಯ ನುಡಿದರು. "ಯಾವುದೋ ಒಂದು ಅಸಾಧಾರಣ ಕಾರ್ಯವನ್ನು ಸಾಧಿಸುವದು ಅದರ ಹಣೆಯಲ್ಲಿ ಬರೆದಿದೆ........ಎಲ್ಲರ ಸ್ವಾತಂತ್ರ್ಯವನ್ನು ರಕ್ಷಿಸುವದರಲ್ಲಿ ಜನಗಣವನ್ನು ಒಗ್ಗೂಡಿಸುವ ಅನಿರ್ವಚನೀಯ ಸಾಮರ್ಥ್ಯವನ್ನು ಅದು ಪ್ರದರ್ಶಿಸಿದೆ" ಈ "ಸಾಮರ್ಥ್ಯ" ದ ಸ್ವರೂಪವನ್ನು ಕುರಿತು ಹಿಂದೀಯರಿಗೆ ಸಾಕಷ್ಟು ಗೊತ್ತಿದೆ.

## ಫ್ರೆಂಚ ರಾಜ್ಯಘಟನೆ

ಫ್ರೆಂಚ ರಾಜ್ಯ ಹೊಸ ರಾಜ್ಯಘಟನೆಯೊಂದರ ಪ್ರಸವವೇದನೆಯಿಂದ ನರಳುತ್ತಿದೆ. ಫ್ರಾನ್ಸದ ಸದ್ಯದ ಅಧೋಗತಿಗೆ ಕಾರಣವಾದ ೧೮೭೫ ರ "ಮೂರನೆ ಪ್ರಜಾರಾಜ್ಯ" ರಾಜ್ಯಘಟನೆಯಲ್ಲಿನಂತೆ ಎರಡು ಶಾಸನ ಸಭೆಗಳುಳ್ಳ ರಾಜ್ಯಘಟನೆ ಬೇಕೆಂಬುದು ಕೆಥೋಲಿಕ ಪಕ್ಷ (ಬಿಗಾಲೆಯ ಪಕ್ಷ)ದ ಅಭಿಲಾಷೆಯಾಗಿದ್ದರೆ, ಸಾಮ್ಯವಾದಿ ಮತ್ತು ಕಮ್ಯುನಿಸ್ಟ ಪಕ್ಷಗಳು ಒಂದೇ ಶಾಸನ ಸಭೆಯುಳ್ಳ ರಾಜ್ಯಘಟನೆ ಬೇಕೆಂಬ ಹಟತೊಟ್ಟಿವೆ. ಸಮಬಲವಾದ ಈ ಮೂರು ಪಕ್ಷಗಳಲ್ಲಿ ಅಧಿಕಾರಕ್ಕಾಗಿ ಮೇಲಾಟ ನಡೆದು, ಮಂತ್ರಿಮಂಡಲಗಳನ್ನು ತಲೆಕೆಳಗು ಮಾಡುವುದರಲ್ಲಿ ಫ್ರೆಂಚ ರಾಜಕಾರಣಿಗಳು ಹೊಸ ರಾಜ್ಯಘಟನೆಯನ್ನು ಸಿದ್ಧಗೊಳಿಸಲು ಘಟನಾಸಮಿತಿಗೆ ಕೊಡಲ್ಪಟ್ಟ ತಿಂಗಳುಗಳಲ್ಲಿ ಹೆಚ್ಚಿನ ಭಾಗವನ್ನು ಕಳೆದವು. ಈಗ ಘಟನಾಸಮಿತಿಯಲ್ಲಿ ಈ ಏಕ ಅಥವಾ ದ್ವಿಶಾಸನ ಸಭೆಗಳ ತಿಕ್ಕಾಟ ಆರಂಭವಾಗಿದ್ದು ಸಾಮ್ಯವಾದಿ ಮತ್ತು ಕಮ್ಯುನಿಸ್ಟರು ಕೂಡಿ ಕೆಥೋಲಿಕರ ಇಚ್ಛೆಯನ್ನು ಬರಿ ಆರು ಮತಗಳಿಂದ ಸೋಲಿಸಿದರು. ಇದರಿಂದ ಬಿಕ್ಕಟ್ಟುಗಳ ರಾಜ್ಯವಾದ ಫ್ರಾನ್ಸಿನಲ್ಲಿ ಹೊಸ ಬಿಕ್ಕಟ್ಟೊಂದು ತಲೆದೋರಿದರೂ ತೋರಬಹುದು.

## ಸೋತ ರಾಷ್ಟ್ರಗಳಲ್ಲಿ ಆಹಾರ ಕೊರತೆ

ಈ ಮಹಾಯುದ್ಧದಲ್ಲಿ ಸೋತ ರಾಷ್ಟ್ರಗಳಲ್ಲಿ, ಮುಖ್ಯತಃ ಜರ್ಮನಿ ಮತ್ತು ಜಪಾನದಲ್ಲಿ ಆಹಾರದ ಕೊರತೆ ಪ್ರಚಂಡ ರೂಪ ಧರಿಸಿದೆ. ಆಕ್ರಮಣಕಾರಿ ಸೈನ್ಯಗಳಿಗೆ ಆ ರಾಜ್ಯಗಳನ್ನು ಶಾಂತವಾಗಿ ಸಾಗಿಸಿಕೊಂಡು ಹೋಗುವುದೇ ಕಠಿನತರವಾಗಿ ತೋರತೊಡಗಿದೆ. ಜರ್ಮನ್ ಮತ್ತು ಜಪಾನಿ ಆಕ್ರಮಣಾಧಿಕಾರಿಗಳು ಲಕ್ಷಾಂತರ ಟನ್ ಆಹಾರದ ಬೇಡಿಕೆಯನ್ನು ಯುಕ್ತರಾಷ್ಟ್ರ ಪರಿಹಾರ ಸಮಿತಿಯ ಮುಂದೆ ಮಂಡಿಸಿದ್ದಾರೆ. ಜಪಾನದ ಸದ್ಯದ ಸರಕಾರ ಲಭ್ಯ ಆಹಾರವನ್ನು ಯೋಗ್ಯವಾಗಿ ಹಂಚುವದಕ್ಕೆ ಕೂಡ ಅಸಮರ್ಥವಾಗಿದೆ. ಅಲ್ಲಿಯ ತಲಾ ಆಹಾರ ಸೀದಾವನ್ನು ತಲಾ ೧೦೦ ಕೆಲೋರಿಯಷ್ಟು ಕಡಿಮೆ ಮಾಡಬೇಕೆಂದು ವಿಚಾರ ನಡೆದಿದೆ.

## ಜಪಾನಿ ಚುನಾವಣೆಗಳು

ಜಪಾನದ ಚುನಾವಣೆಗಳು ಮುಗಿದು ಹೆಚ್ಚಿನ ಅಂಶದ ಪರಿಣಾಮಗಳು ಹೊರಬಿದ್ದಿವೆ. ಮುಂದೆಗಾಮಿಗಳಿಗೆ (ಲಿಬರಲ್) ಎಲ್ಲರಿಗಿಂತ ಹೆಚ್ಚು ಸ್ಥಾನಗಳು ದೊರೆತಿವೆ. ಅವರಿಗಿಂತ ಕೆಳಗೆ ಪ್ರಗತಿಗಾಮಿಗಳೂ ಸ್ವತಂತ್ರರೂ ಸಾಮ್ಯವಾದಿ ಪ್ರಜಾತಂತ್ರಿಗಳೂ ಸಮಬಲರಾಗಿದ್ದಾರೆ. ಕಮ್ಯುನಿಸ್ಟರಿಗೆ ಬರಿ ಕೈಬೆರಳಿನಲ್ಲಿ ಎಣಿಸುವಷ್ಟು ಸ್ಥಾನಗಳು ಲಭಿಸಿವೆ. ಈ ಚುನಾವಣೆಗಳಿಂದ ಮತ್ತೇನೂ ನಿರ್ಣಯವಾಗಿಲ್ಲವಾದಂತಾದರೂ ಸೊತ್ತಿಗೆಯನ್ನು ಉಳಿಸಬೇಕೆನ್ನುವವರಿಗೆ ನಿಶ್ಚಿತವಾದ ವಿಜಯ ದೊರೆತಂತಾಯಿತು. ಕಮ್ಯುನಿಸ್ಟರನ್ನು ಹೊರತು ಉಳಿದ ಮೇಲೆ ಹೇಳಿದ ಪಕ್ಷಗಳೆಲ್ಲ ಅರಸೊತ್ತಿಗೆಯ ಉಳಿವನ್ನೇ ತಮ್ಮ ಪ್ರಚಾರದ ಪ್ರಮುಖಾಂಗವಾಗಿ ಮಾಡಿದ್ದವು. ಈ ಫಲಿತಾಂಶದಿಂದ ಕಮ್ಯುನಿಸ್ಟರು ನಿರಾಶರಾಗಿ ಹೊಸ ಚುನಾವಣೆ ಬೇಕೆಂದು ಬೇಡಿದ್ದಾರೆ. ಸೋವಿಯೆಟ್ ಪತ್ರಿಕೆಗಳು ಈ ಚುನಾವಣೆಗಳನ್ನು ಟೀಕಿಸಿ ಈ ಬಗೆಯಾಗಿ ಜಪಾನರನ್ನು "ಪ್ರಜಾತಂತ್ರ"ವಾದಿಗಳಾಗಿ ಮಾಡುವದು ಸಾಧ್ಯವಿಲ್ಲೆಂದು ಹೇಳಿವೆ. ಜನರಲ್ ಮ್ಯಾಕಾರ್ಥರರ ಈ ಭ್ರಾಂತಿಯನ್ನು ಅವು ಖಂಡಿಸಿ ಅರಸೊತ್ತಿಗೆಯನ್ನು ಕಿತ್ತೊಗೆಯಬೇಕೆಂದು ಪ್ರತಿಪಾದಿಸಿವೆ.

ಬಾರನ್ ಶಿದೆಹಾರಾರ ಮಂತ್ರಿಮಂಡಲ ತನ್ನ ಸ್ಥಾನಕ್ಕೆ ಗಟ್ಟಿಯಾಗಿ ಅಂಟಿಕೊಂಡಿದ್ದು ಹೊಸ ರಾಜ್ಯಘಟನೆಯನ್ನು ಸಿದ್ಧಗೊಳಿಸಿ ಮಂಜೂರು ಮಾಡಿಸಿಕೊಂಡ ಹೊರತು ತಾನು ಅಧಿಕಾರ ಬಿಟ್ಟು ಕೊಡೆನೆಂದು ಜಾಹೀರು ಮಾಡಿದೆ.

## ಇಂಡೋನೇಶಿಯಕ್ಕೇನು?

ಡಚ್ ಮತ್ತು ಬ್ರಿಟಿಶ ಪ್ರತಿನಿಧಿಗಳು ಇಂಡೊನೇಶಿಯನ ಸಮಸ್ಯೆಯನ್ನು ಕುರಿತು ಲಂಡನ್ನಿನಲ್ಲಿ ಈಚೆಗೆ ನಡೆಸಿದ ಮಾತುಕತೆಗಳ ಪರಿಣಾಮವಾಗಿ ಉಭಯತರಲ್ಲಿ ಇಂಡೋನೇಶಿಯಾದ ಬಗೆಗೆ "ಸಂಪೂರ್ಣ ಐಕಮತ್ಯ"ವಾಗಿದೆಯೆಂದು ತಿಳಿದು ಬಂದಿದೆ. ನೆದರ್ಲ್ಯಾಂಡ್ಸ ಕಾಮನ್‌ವೆಲ್ತದಲ್ಲಿ ಇಂಡೋನೇಶಿಯಾ "ಪಾಲುಗಾರಿಕೆ" ಪಡೆಯಬೇಕೆಂಬ ಆ ಹಳೆಯ ಡಚ್ ಕೊಡುಗೆಯೇ ಈ "ಐಕಮತ್ಯ"ದಲ್ಲಿ ಅಂಗೀಕರಿಸಲ್ಪಟ್ಟಿದೆ. ಇಂಡೋನೇಶಿಯಾಕ್ಕೆ, ಮುಖ್ಯವಾಗಿ ಜಾವಾಕ್ಕೆ, ಪರಿಮಾವಧಿ ಸ್ವಾಯತ್ತತೆ; ೨೫ ವರ್ಷ ಕಾಲ ಡಚ್ ಸಾಮ್ರಾಜ್ಯದಲ್ಲಿ ಪಾಲುಗಾರಿಕೆ; ಆ ಅವಧಿಯ ನಂತರ ಬೇಕಾದರೆ ಸಿಡಿದು ಹೋಗುವ ಹಕ್ಕು; ಸಂರಕ್ಷಣೆಯ ವಿಷಯದಲ್ಲಿ ಜತೆ ಹೊಣೆಗಾರಿಕೆ ಆದರೆ ಇಂಡೋನೇಶಿಯಾದ ವಿಶಿಷ್ಟ ಸಂರಕ್ಷಣೆಯ ವಿಷಯದಲ್ಲಿ ಇಂಡೋನೇಶಿಯನ್ನರಿಗೆ ಅಧಿಕ ಹಕ್ಕು; ಇಂಡೋನೇಶಿಯನ್, ಯುರೋಪಿಯನ್ ಮತ್ತು ಇಂಡೋನೇಶಿಯಾ ನಿವಾಸಿ ಯುರೋಪಿಯನ್ ಜನರನ್ನೊಳಗೊಂಡ ಇಂಡೋನೇಶಿಯನ್ ರಾಷ್ಟ್ರಪ್ರಜಾತ್ವದ ನಿರ್ಮಾಣ, ಇವು ಈ ಸೂಚನೆಗಳ ಸಾರವೆಂದು ಹೇಳಬಹುದು. ಈ ಕೊಡುಗೆಯನ್ನು ಇಂಡೋನೇಶಿಯನ್‌ರು ಅಂಗೀಕರಿಸಬಹುದೆಂಬ ಪ್ರಬಲ ಆಶೆಯನ್ನು ಡಚ್ ವರ್ಗಗಳು ವ್ಯಕ್ತಗೊಳಿಸಿವೆ.

* * *

ಹಿಂದೀಯರಿಗೆ ಅಮೇರಿಕೆಯಲ್ಲಿ ವಲಸೆ ಹೋಗಿ ನೆಲೆಸಲು ಅವಕಾಶ ಕೊಡುವ ಮಸೂದೆಯ ವಿಷಯದಲ್ಲಿ ಅನೇಕ ಅಮೇರಿಕನ್ ಪ್ರಮುಖರು ಸಿನೇಟ ಸಮಿತಿಯ ಮುಂದೆ ಸಾಕ್ಷಿ ಕೊಟ್ಟು ಅನುಕೂಲ ಮತ ಪ್ರದರ್ಶಿಸಿದ್ದಾರೆ. ಆ ಮಸೂದೆ ಕಾಂಗ್ರೆಸ್ಸಿನಲ್ಲಿ ಪಾಸಾಗುವ ಲಕ್ಷಣ ಕಾಣುತ್ತಿದೆ.

* * *

ದಕ್ಷಿಣ ಅಫ್ರಿಕೆಯಲ್ಲಿ ಅತ್ಯುತ್ಕೃಷ್ಟವಾದ ಹೊಸ ಚಿನ್ನದ ಆದುರಗಳ ಶೋಧವಾಗಿರುವದರಿಂದ ಲಂಡನ್ನಿನಲ್ಲಿ ದ. ಅಫ್ರಿಕಾ ಚಿನ್ನದ ಗಣಿಗಳ ಪಾಲುಗಳ ಬೆಲೆ ವಿಪರೀತ ಏರಿದೆ.

* * *

ಮಂಚೂರಿಯಾದ ಸ್ವಾಮಿತ್ವಕ್ಕಾಗಿ ಚಿಯಾಂಗ ಕಮ್ಯುನಿಸ್ಟ ಪಕ್ಷಗಳೊಳಗೆ ಕದನವೇ ಸಾಗಿದೆ.

## ೧೫ ರೂ. ಕೊಟ್ಟರೂ ಒಂದು ಮಣ ಗೋದಿ ಇಲ್ಲ
### ಕಾಠೇವಾಡದಲ್ಲಿ ಜನತೆಯ ಸಂಕಷ್ಟ

ಕಾಠೇವಾಡದಲ್ಲಿ ಆಹಾರ ಪರಿಸ್ಥಿತಿ ಅತ್ಯಂತ ಬಿಕ್ಕಟ್ಟಿನದಾಗಿದೆ. ರಾಜಕೋಟದಲ್ಲಿಯ ಗಿರಣಿಗಳ ಮತ್ತು ಉಳಿದ ನೋಕರರು ಮೆರವಣಿಗೆ ತೆಗೆದು ತಮ್ಮ ದೂರುಗಳನ್ನು ತಿಳಿಸುವರಾಗಿ ಸಭೆ ಸೇರಿಸಿದ್ದರು. ಜನರ ಬೇಡಿಕೆಗಳತ್ತ ಅನ್ನ ಸಮಿತಿಯವರು ಯೋಗ್ಯ ಲಕ್ಷ ಕೊಡದಿದ್ದರೆ ಸಾರ್ವಜನಿಕ ರಸ್ತೆಯ ಮೇಲೆ ಜನ ಸತ್ತುಬಿದ್ದದ್ದನ್ನು ಅಧಿಕಾರಿಗಳು ನೋಡಬೇಕಾದ ಪ್ರಸಂಗ ಬರುವದು. ರಾಜಕೋಟದ ಜನ ಈ ದುಃಸ್ಥಿತಿ ಸಹಿಸಲಾರರೆಂದು ಅಧ್ಯಕ್ಷ ದೇಭರಭಾಯಿಯವರು ಹೇಳಿದರು. ವಡವಾಣದಲ್ಲಿ ೧೫ ರೂಪಾಯಿ ಕೊಟ್ಟರೂ ಒಂದು ಮಣ ಅಕ್ಕಿ ಸಿಕ್ಕದಂತಹ ದುಃಸ್ಥಿತಿಯಿದೆ ಒಟ್ಟಾರೆ ಹಳ್ಳಿಗಳಲ್ಲಿ ಜನರಿಗೆ ಅನ್ನ ಸಿಕ್ಕುವುದಿಲ್ಲ ಹೊರಗಿನಿಂದ ತರಲಿಕ್ಕೆ ಅಪ್ಪಣೆಯಿಲ್ಲ. ಪಲ್ಲೆ ಕಾಯಿ ಬಟಾಟೆಗಳ ಮೇಲೆ ಜನ ದಿನ ಹಾಕಬೇಕಾಗಿದೆ.

---

ಲಾಹೋರಿನಲ್ಲಿ ೪೦ ಸಾವಿರ ರೇಲ್ವೆ ನೋಕರರು ಕಳೆದ ಬುಧವಾರ ೨ ಗಂಟೆ ವರೆಗೆ ಸಂಪು ಹೂಡಿದ್ದರು. ಕಾರಕೂನರೂ ಇದರಲ್ಲಿ ಭಾಗ ವಹಿಸಿದ್ದರು.

---

ಕ್ರಮಶಃ ಪಾನನಿರೋಧದ ಯೋಜನೆಗನುಸಾರವಾಗಿ ಸಿಂಧ ಸರಕಾರದವರು ಗಾಂಜಾ ಮಾರಾಟವನ್ನು ಎಪ್ರಿಲ ೧ ರಿಂದ ನಿಲ್ಲಿಸಿರುವರು.

ಸಿಂಧದಲ್ಲಿ ಗೋದಿ ಬೆಳೆ ಚೆನ್ನಾಗಿ ಬಾರದ್ದರಿಂದ ಹೊರಗೆ ಹೆಚ್ಚು ಗೋದಿ ಕಳಿಸುವಂತಿಲ್ಲ. ಅಕ್ಕಿ ಮಾತ್ರ ಹೆಚ್ಚಿಗೆ ಬೇರೆ ಜಿಲ್ಲೆಗಳಿಗೆ ಕಳಿಸಬಹುದು.

ಯಾವತ್ತೂ ಕಾಯಂ ನವಕರರ ಸಂಬಳವನ್ನು ಈಗಿರುವ ತುಟ್ಟಿ ಭತ್ತೆ ಕೂಡಿ ಆಗುವಷ್ಟು ಹೆಚ್ಚಿಸಲು ಸಿಂಧ ಸರಕಾರದವರು ಯೋಜಿಸಿರುವರು.

---

AC 50 —K

# “ಏನು ಮಾಡಲಿಕ್ಕೆ ಬೇಕು”

—ಗಾಂಧೀಜಿ

“ಕಾರಣವೇನೇ ಇರಲಿ, ಸರಕಾರವು ಮತ್ತು ಜನತೆಯು ಆಹಾರದ ಕೊರತೆಯ ದುರ್ಧರ ಪ್ರಸಂಗವನ್ನು ಧೈರ್ಯಸ್ಥೈರ್ಯಗಳಿಂದ ಎದುರಿಸದಿದ್ದಲ್ಲಿ ಸರ್ವನಾಶವಾಗುವುದರಲ್ಲಿ ಸಂಶಯವಿಲ್ಲ. ಕೇವಲ ಇದೊಂದೇ ರಂಗವನ್ನು ಬಿಟ್ಟು ಉಳಿದ ಯಾವತ್ತೂ ರಂಗಗಳಲ್ಲಿ ನಾವು ಈ ಪರದೇಶೀ ಸರಕಾರದೊಡನೆ ಹೋರಾಡತಕ್ಕದ್ದು, ಮತ್ತು ಈ ರಂಗದಲ್ಲಿಯೂ ಕೂಡ ಸಯುಕ್ತಿಕವಾದ ಜನತೆಯ ಮತವನ್ನು ಕಡೆಗಣಿಸಿದರೆ ಇಲ್ಲವೆ ತಾತ್ಸಾರ ಮಾಡಿದರೆ ಈ ರಂಗದಲ್ಲಿಯೂ ನಾವು ಅವರೊಡನೆ ಹೋರಾಡುವೆವು.

—ಫೆಬ್ರುವರಿ ೧೭ನೇ ತಾರೀಖಿಗೆ ಕೊಟ್ಟ ಹೇಳಿಕೆ.

## ನಮ್ಮ ಪ್ರತಿಜ್ಞೆ ಮತ್ತು ಬಿನ್ನಹ

ಕೊರತೆಯ ಭಾಗಗಳಲ್ಲಿರುವವರಿಗೆ ನಾವು ಸಂಪೂರ್ಣ ಬೆಂಬಲ ವೀಯುವ ಬಗ್ಗೆ ಪ್ರತಿಜ್ಞೆ ಮಾಡುತ್ತೇವೆ. ದೇಶದ ಯಾವತ್ತೂ ಸಾಧನ ಸಾಮುಗ್ರಿಯನ್ನು ಒಂದುಗೂಡಿಸಿ ಅವರಿಗೆ ತ್ವರಿತವಾಗಿ ನೆರವನ್ನು ನೀಡಲಾಗುತ್ತಿದೆ. ಅವರಿಗಿರುವ ಆಹಾರದ ಕೊರತೆಯಲ್ಲಿ ದೇಶದ ಉಳಿದ ಭಾಗವು ಪಾಲು ವಹಿಸುವದಲ್ಲದೆ ಸಮಪಾಲು ವಹಿಸುವದು. ಪ್ರತಿಯೊಬ್ಬನಿಗೆ ಯೋಗ್ಯ ಪ್ರಮಾಣದಲ್ಲಿ ಆಹಾರವು ದೊರೆಯುವಂತೆ ಮಾಡುವದಕ್ಕಾಗಿ ಶೀದಾ ಪದ್ಧತಿಯನ್ನು ವಿಸ್ತರಿಸಲಾಗುತ್ತಿದೆ. ಬೆಲೆ ನಿಯಂತ್ರಣವನ್ನು ತಪ್ಪದೆ ಸಾಗಿಸಲಾಗುವುದು. ಶಾಂತತೆ ಮತ್ತು ಆತ್ಮ ವಿಶ್ವಾಸದಿಂದ ನಡೆದುಕೊಳ್ಳಿರಿ. ನಿಮಗೆ ಅವಶ್ಯವಿರುವದಕ್ಕಿಂತ ಹೆಚ್ಚಿಗೆ ಕೊಂಡುಕೊಳ್ಳಬೇಡಿರಿ. ಲಾಭಬಡಕರೊಡನೆ ಯಾವದೇ ತರದ ಸಂಬಂಧವನ್ನಿಟ್ಟುಕೊಳ್ಳಬೇಡಿರಿ.

ಹೆಚ್ಚುಳಿದ ಭಾಗಗಳಲ್ಲಿರುವವರಿಗೆ ಸಂಪೂರ್ಣ ಸಹಾಯವನ್ನು ಒದಗಿಸಬೇಕೆಂದು ನಾವು ಅವರಿಗೆ ಬಿನ್ನವಿಸಿಕೊಳ್ಳುತ್ತೇವೆ. ನಿಮ್ಮಲ್ಲಿ ಹೆಚ್ಚಾಗಿ ಇರುವ ಕಾಳನ್ನು ನೀವು ಕೊಟ್ಟುಬಿಡಬೇಕಾಗಿದ್ದರೂ ನಿಮಗೆ ಸಾಕಷ್ಟು ಕಾಳು ಉಳಿಯುವುದು. ನಿಮ್ಮ ಪಟ್ಟಣದಲ್ಲಿ ಶೀದಾ ಕ್ರಮವನ್ನು ಕಡಿಮೆಮಾಡಿದರೆ ನಿಮ್ಮ ದೇಶಬಾಂಧವರಿಗೆ ನೆರವಾಗುವುದಕ್ಕಾಗಿ ಹೀಗೆ ಮಾಡಲಾಗಿದೆಯೆಂದು ನೆನಪಿನಲ್ಲಿಡಿರಿ. ಇಷ್ಟೆಲ್ಲ ಆಗಿಯೂ ನಿಮ್ಮ ಹತ್ತರ ಸಾಕಷ್ಟು ಉಳಿಯುವುದು. ಸ್ವಲ್ಪಾದರೂ ಕೂಡಿಹಾಕಿ ಇಡಬೇಡಿರಿ. ಅಧಿಕಾರಿಗಳೊಡನೆ ಸಹಕರಿಸಿರಿ.

**ಆಹಾರದ ಕೊರತೆಯನ್ನು ಹೋಗಲಾಡಿಸಿರಿ**

ಹುಮ್ಮಸ್ಸಿನಿಂದ ದುಡಿಯಿರಿ ಎಲ್ಲರೂ ಪಾಲುಗಾರರಾಗಿರಿ

## ವ್ಯಾಪಾರಿಗಳಿಗೆ ಮತ್ತು ಬೆಳೆಯುವವರಿಗೆ ಸಂದೇಶ

ನಿಮಗೆ ಶಕ್ಯವಿದ್ದಷ್ಟು ಕಾಳನ್ನೆಲ್ಲ ಹೊರಗೆಡವಿರಿ; ನೀವು ಕೂಡಿಡುವ ಪ್ರತಿಯೊಂದು ಮಣ ಕಾಳು ಒಬ್ಬ ದೇಶಬಾಂಧವನ ಮರಣಕ್ಕೆ ಕಾರಣವಾಗುವುದು. ನಿಯಂತ್ರಿತ ಬೆಲೆಗಳಿಗಷ್ಟೇ ಮಾರಿರಿ—ಅವು ನಿಮಗೆ ಹಾಗೂ ಗ್ರಾಹಕರಿಗೆ ಇಬ್ಬರಿಗೂ ಯೋಗ್ಯವಾಗಿವೆ. ಎರಡನೇಯವರಿಗೆ ದುಃಖ ಕೊಟ್ಟು ಹಣ ಗಳಿಸುವುದು ಪಾಪವೆಂದು ತಿಳಿಯತಕ್ಕದ್ದು.

ಲಾಭಬಡಕರನ್ನು ಮತ್ತು ಕಳ್ಳಪೇಟೆಗಾರರನ್ನು ತಮ್ಮ ಯಾವತ್ತೂ ಶಕ್ತಿಯನ್ನು ಉಪಯೋಗಿಸಿ ಹತ್ತಿಕ್ಕಬೇಕೆಂದು ಸರಕಾರ ಹಾಗೂ ಜನತೆಯು ನಿಶ್ಚಯಿಸಿರುತ್ತದೆ. ಕಳ್ಳಪೇಟೆಯನ್ನು ತಪ್ಪಿಸಿರಿ; ಅದು ಅಪರಾಧವಾಗಿದೆ.

ಹಿಂದುಸ್ಥಾನ ಸರಕಾರದ ಆಹಾರ ಖಾತೆ, ಹೊಸದಿಲ್ಲಿ, ಇವರ ಪ್ರಕಟನೆ.

ಕರ್ಮವೀರ



# ಹರಿಜನ ಪುರವಣಿ

## ಪ್ರಚಲಿತ ಉಪವಾಸ

ಉಪವಾಸವೊಂದು ಅನಿವಾರ್ಯವಾದ ಪಿಡುಗು ಆಗಿದೆ. ಇದರ ದೋಷ ನಿಮ್ಮದ ಎಂದು ಸುದ್ದಿಗಾರರೊಬ್ಬರು ಬರೆದಿರುವರಲ್ಲದೆ ಮತ್ತೆ ಹೀಗೆ ತಿಳಿಸಿದ್ದಾರೆ.

"ಆಂತರಿಕ ಮತ್ತು ಬಾಹ್ಯ ಶುದ್ಧಿಗಾಗಿ ಉಪವಾಸದ ಸಾಮರ್ಥ್ಯವನ್ನು ಎಲ್ಲರೂ ಬಲ್ಲವರಾಗಿದ್ದಾರೆ. ಆದರೆ ಈಗ ತನ್ನ ಸಂಬಳ ಹೆಚ್ಚಾಗಬೇಕೆಂದಾಗಲಿ ತನ್ನ ಪಂಗಡದಲ್ಲಿ ತನ್ನನ್ನು ಶಾಸನ ಸಭೆಗೆ ಹುರಿಯಾಳನ್ನಾಗಿ ಆರಿಸಬೇಕೆಂದಾಗಲಿ, ಬೇರೆ ಕಾರಣಗಳಿಗಾಗಲಿ ಉಪವಾಸ ಕೈಕೊಳ್ಳಲಾಗುತ್ತಿವೆ. ಅಸ್ಪೃಶ್ಯತೆ ಹೋಗಬೇಕೆಂದು ಉಪವಾಸ ಕೈಕೊಂಡವನನ್ನು ನೀವು ಪುರಸ್ಕರಿಸುತ್ತೀರಿ. ಆದರೆ ಬೇರೊಂದು ಕಾರಣಕ್ಕಾಗಿ ಆಮರಣ ಉಪವಾಸ ಕೈಕೊಂಡವನನ್ನು ಎತ್ತಿ ಹಿಡಿಯುವದಿಲ್ಲ. ಇದು ಅನ್ಯಾಯವಲ್ಲವೆ? ಯಾವಾಗ ಉಪವಾಸ ಮಾಡಬೇಕು, ಯಾವಾಗ ಮಾಡಬಾರದು, ಎಷ್ಟು ಅವಧಿಯವರೆಗೆ ಉಪವಾಸ ಮಾಡಬೇಕು, ಹಣ್ಣಿನ ರಸವನ್ನು ತೆಗೆದುಕೊಳ್ಳಬೇಕೊ ಬರಿ ನೀರನ್ನು ಕುಡಿದಿರಬೇಕೊ ಎಂಬ ಬಗ್ಗೆ ನೀವು ಕಟ್ಟಳೆಗಳನ್ನು ಮಾಡಬಾರದೆ? ನಿಮ್ಮ ವಿಷಯದಲ್ಲೆಲ್ಲ ನೀವು ಅಂತರ್ವಾಣಿಯ ಮಾತೆ ಎತ್ತುತ್ತೀರಿ. ನೀವೇ ಉಪವಾಸ ಕೈಕೊಳ್ಳುವದನ್ನು ನಿಲ್ಲಿಸಿ ಇತರರನ್ನೂ ತಡೆದರೆ ಉತ್ತಮವಾಗಲಿಕ್ಕಿಲ್ಲವೆ?"

ಈ ವಾದದಲ್ಲಿ ಆವೇಶವಿದೆ. ಆದರೆ ಈಗ ಸೂಚಿಸಿದಂತೆ ಕಟ್ಟಳೆಗಳನ್ನು ರಚಿಸುವದು ಅಸಾಧ್ಯ. ಅನುಭವವೊಂದೆ ಕಟ್ಟಳೆಗಳನ್ನು ನಿರೂಪಿಸಬಲ್ಲದು. ವಿಶಿಷ್ಟ ಸಂದರ್ಭದಲ್ಲಿ ಕೆಲವೊಬ್ಬನು ತನ್ನ ನಿಯಮಗಳನ್ನು ರಚಿಸಿಕೊಳ್ಳಬಲ್ಲನು. ಇಲ್ಲವೆ ನನ್ನ ಅಧಿಕಾರವನ್ನು ಅವನು ನಂಬುತ್ತಿದ್ದರೆ ನನ್ನನ್ನು ಕೇಳಬಹುದು. ಸತ್ಯಾಗ್ರಹದ ಶಸ್ತ್ರಾಗಾರದಲ್ಲಿ ಉಪವಾಸವೊಂದು ರಾಮಬಾಣವೆಂದು ಹೇಳಲು ನಾನು ದುಡುಕಿದ್ದೆ. ಸತ್ಯಾಗ್ರಹದ ಜನಕನಾದ ನಾನು ಉಪವಾಸವನ್ನು ಉಪಯೋಗಿಸಿದ್ದೇನೆ. ಸತ್ಯಾಗ್ರಹಕ್ಕೆ ಸಂಬಂಧಿಸಿದ ಉಪವಾಸವನ್ನು ಕೈಕೊಳ್ಳುವದಾದರೆ ಮೊದಲು ನನ್ನನ್ನು ಕೇಳಿ, ಬರೆಹದಲ್ಲಿ ಒಪ್ಪಿಗೆ ಪಡೆದುಕೊಳ್ಳಬೇಕು. ಈ ಉಪದೇಶವನ್ನು ಅನುಸರಿಸಿದರೆ ಕನಿಷ್ಟ ನನ್ನ ಜೀವಮಾನವಿರುವವರೆಗಾದರೂ ಕಟ್ಟಳೆಗಳನ್ನು ರಚಿಸುವ ಅವಶ್ಯಕತೆ ಉಂಟಾಗಲಾರದು.

ಆದರೂ ನಾನು ಒಂದು ತತ್ವವನ್ನು ನಿರ್ದೇಶಿಸಬಿಚ್ಛಿಸುತ್ತೇನೆ. ಸತ್ಯಾಗ್ರಹಿಯು ತನ್ನ ಸಂಕಟಗಳ ನಿವಾರಣೆಗೆ ಉಳಿದ ಎಲ್ಲ ಮಾರ್ಗಗಳನ್ನು ಯೋಜಿಸಿ ನಿರುಪಯುಕ್ತವೆಂದು ಕಂಡುಬಂದಾಗ ಕೊನೆಯ ಉಪಾಯವೆಂದು ಉಪವಾಸವನ್ನು ಕೈಕೊಳ್ಳಬಹುದು. ಒಬ್ಬರನ್ನು ನೋಡಿ ಇನ್ನೊಬ್ಬರು ಉಪವಾಸ ಕೈಕೊಳ್ಳಲು ಅವಕಾಶವೇ ಇಲ್ಲ. ಅಂತಶ್ಶಕ್ತಿಯಿಲ್ಲದವನು ಉಪವಾಸದ ಯೋಚನೆಯನ್ನು ಮಾಡಬಾರದು; ಯಶಸ್ಸನ್ನಂತೂ ಆಶಿಸಲೆ ಬಾರದು. ಆದರೆ ಸತ್ಯಾಗ್ರಹಿಯೊಮ್ಮೆ ಮನಗಂಡು ನಿರ್ಧಾರದಿಂದ ಉಪವಾಸ ಕೈಕೊಂಡರೆ ತನ್ನ ಕೃತಿ ಫಲಿಸಲಿ, ಬಿಡಲಿ ತನ್ನ ನಿರ್ಧಾರದಿಂದ ಅವನು ಹಿಂಜರಿಯಬಾರದು. ಉಪವಾಸವು ಫಲಿಸಬಹುದು ಇಲ್ಲವೆ ಫಲಿಸಲಿಕ್ಕಿಲ್ಲವೆಂದು ಇದರರ್ಥವಲ್ಲ. ಫಲಾಪೇಕ್ಷೆಯಿಂದ ಉಪವಾಸ ಕೈಕೊಂಡರೆ ಅಯಶಸ್ವಿಯಾಗುವನು. ಇಂಥ ಸತ್ಯಾಗ್ರಹಿಗೆ ಸೋಲುಂಟಾಗಿಲ್ಲವೆಂದು ತೋರಿದರೂ ಉಪವಾಸದಿಂದ ದೊರಕಬಹುದಾದ ಅಂತರಿಕ ಆನಂದವು ಅವನಿಗೆ ದೊರೆಯಲಾರದು.

ಹಣ್ಣಿನ ರಸವನ್ನು ತೆಗೆದುಕೊಳ್ಳಬೇಕೋ ಬಿಡಬೇಕೊ ಎಂಬುದು ಅವರವರ ದೇಹದ ಸಹಿಷ್ಣುತೆಯನ್ನವಲಂಬಿಸಿರುತ್ತದೆ. ಆದರೆ ದೇಹಕ್ಕೆ ಅವಶ್ಯವಿದ್ದಕ್ಕಿಂತ ಹೆಚ್ಚಿಗೆ ಮಾತ್ರ ಹಣ್ಣಿನ ರಸವನು ತೆಗೆದುಕೊಳ್ಳಬಾರದು. ಬರಿ ನೀರನ್ನು ಕುಡಿದು ಉಪವಾಸ ಮಾಡುವವನ ಅಂತಶ್ಶಕ್ತಿ ಹೆಚ್ಚಿಗಿದೆಂದು ಹೇಳಬಹುದು.

ತನ್ನ ಪಗಾರ ಹೆಚ್ಚಿಸಿಕೊಳ್ಳಬೇಕು ಮುಂತಾದ ಸ್ವಾರ್ಥದ ಉದ್ದೇಶ ಸಾಧನಗಾಗಿ ಉಪವಾಸ ಕೈಕೊಳ್ಳುವದು ತಪ್ಪು. ಆದರೆ ಪಗಾರ ಹೆಚ್ಚಿಸಿಕೊಳ್ಳುವದಕ್ಕಾಗಿ ಕೇವೊಂದು ಪಂಗಡದ ಪರವಾಗಿ ವಿಶಿಷ್ಟ ಪರಿಸ್ಥಿತಿಯಲ್ಲಿ ಉಪವಾಸ ಕೈಕೊಳ್ಳುವದು ತಪ್ಪಾಗಲಾರದು.

ಪ್ಲೇಗದಂತೆ ಹರಡುವ ನಗೆಗೇಡು ಉಪವಾಸಗಳು ಅಪಾಯಕರವಿರುತ್ತವೆ. ಆದರೆ ಕರ್ತವ್ಯವೆಂದು ಉಪವಾಸ ಮಾಡಬೇಕಾಗಿ ಬಂದಾಗ ಹಿಂಜರಿಯಬಾರದು. ಆದ್ದರಿಂದಲೆ ಅವಶ್ಯವಿದ್ದಾಗ ನಾನು ಉಪವಾಸ ಕೈಕೊಳ್ಳುವೆನು. ಯಾವ ನೆವದಿಂದಲೂ ಹಿಂದುಳಿಯುವದಿಲ್ಲ. ನಾನೇ ಉಪವಾಸ ಕೈಕೊಳ್ಳುತ್ತಿರುವಾಗ ಅದೇ ಕಾರಣಗಳಿಗಾಗಿ ಇತರರೂ ಉಪವಾಸ ಕೈಕೊಳ್ಳುವದನ್ನು ನಾನು ತಡೆಯಲಾರೆನು. ಉತ್ತಮ ಸಂಗತಿಗಳ ದುರುಪಯೋಗವೂ ಅನೇಕ ಸಲ ನಡೆಯುತ್ತದೆ. ನಾನಿದನ್ನು ನಿತ್ಯ ನೋಡುತ್ತೇನೆ.

ಹೊಸದಿಲ್ಲಿ — ಮೋ. ಕ. ಗಾಂಧಿ

೧೩—೪—೪೬

(ಹರಿಜನ ಬಂಧು)

## ಮಂತ್ರಿಯೊಬ್ಬನ ಚಿಂತೆ

**ಡಾ. ಕಟಿಜು ಅವರು ಈ ಕೆಳಗಿನ ಟಿಪ್ಪಣಿ ಕಳಿಸಿದ್ದಾರೆ:—**

"ಹಿಂಗಾರಿ ಪೈರು ದೇಶದ ಎಷ್ಟೋ ಪ್ರದೇಶಗಳಲ್ಲಿ ಹಾಳಾಗಿರುವದರಿಂದ ಹಿಂದುಸ್ತಾನದಲ್ಲಿ ತೀವ್ರ ಆಹಾರ ಕೊರತೆಯುಂಟಾದೀತೆಂಬ ಭಯ ವಿಸ್ತಾರವಾಗಿ ಹಬ್ಬಿದೆ. ಆಹಾರ ಪೂರೈಕೆಯ ಮಟ್ಟಿಗೆ ಬಡವನಿಗೂ ಬಲ್ಲಿದವನಿಗೂ ಸಮಾನವಾದ ಸಂದರ್ಭವನ್ನು ಒದಗಿಸಬೇಕೆಂಬ ಇಚ್ಛೆಯಿಂದ ಯುಕ್ತ ಪ್ರಾಂತದ ಹಲವು ನಗರ ಪ್ರದೇಶಗಳಲ್ಲಿ ಸೀದಾ ಕ್ರಮವನ್ನು ಜಾರಿಯಲ್ಲಿ ತಂದುದಾಗಿದೆ. ಸೀದಾ ಕ್ರಮವನ್ನು ತಂದುದರ ಜತೆಗೆ ಆಯಾ ಪ್ರದೇಶಗಳ ಜನರ ಹೊಟ್ಟೆಗೆ ಆಹಾರ ಒದಗಿಸುವ ಹೊಣೆ ಸರಕಾರದ ಹೆಗಲಿಗೆ ಬಿದ್ದಿದೆ. ನಿರೀಕ್ಷಿಸಿದ ಆಹಾರ ಕೊರತೆ ಎಷ್ಟು ತೀಕ್ಷ್ಣವಾಗಿದೆಯೆಂದರೆ ಯುಕ್ತ ಪ್ರಾಂತದಲ್ಲಿ ಸೀದಾವನ್ನು ಕನಿಷ್ಟತಮ ಪ್ರಮಾಣಕ್ಕೆ ಅಂದರೆ ಆರು ಚಟಾಕು ಧಾನ್ಯಕ್ಕೆ ಇಳಿಸಲಾಗಿದೆ. ಇದರಲ್ಲಿ ಎರಡು ಚಟಾಕು ಗೋದಿ, ಎರಡು ಚಟಾಕು ಅಕ್ಕಿ ಮತ್ತು ಎರಡು ಚಟಾಕು ಮಿಶ್ರಿತ ಹಿಟ್ಟು ಸೇರಿದೆ. ಮಿಶ್ರಿತ ಹಿಟ್ಟು ಸಾಮಾನ್ಯವಾಗಿ ಜನರಿಗೆ ಅಪ್ರಿಯವಾಗಿದೆ. ಆದುದರಿಂದ ಸೀದಾ ಪ್ರಮಾಣದಲ್ಲಿ ಇನ್ನು ಕಡಿತ ಮಾಡುವದು ಅಸಾಧ್ಯವೆಂದೇ ಹೇಳಬೇಕು. ನಗರ ಪ್ರದೇಶಗಳ ಹೊಟ್ಟೆ ತುಂಬಿಸಬೇಕಾದರೆ ಧಾನ್ಯಗಳು ಹಳ್ಳಿಗಳಿಂದ ಧಾರಾಕಾರವಾಗಿ ಬರಬೇಕೆಂಬುದು ಸ್ವಯಂ ವಿದಿತವಾದ ಸಂಗತಿ. ಧಾರಾವಾಹಿಯಾಗಿ ಪೂರೈಕೆಗಳು ಬರುವಂತೆ ಉಳಿತ. ಯಂದ ಜಿಲ್ಹೆಗಳಿಂದ ಅಂದರೆ ಆಯಾ ಜಿಲ್ಹೆಗಳ ಗ್ರಾಮಾಂತರ ಪ್ರದೇಶಗಳಿಗೆ ಸಾಲುವಷ್ಟಾಗಿ ಹೆಚ್ಚಿಗೆ ಉಳಿಯುವಷ್ಟು ಉತ್ಪಾದನೆಯಾಗುವದೆಂದು ನಿರೀಕ್ಷಿಸಲ್ಪಟ್ಟ ಜಿಲ್ಹೆಗಳಿಂದ, ಹುಟ್ಟುವಳಿಯನ್ನು ಒತ್ತಾಯದಿಂದ ಸಂಗ್ರಹಿಸುವದು ಅಪೇಕ್ಷಣೀಯವೆಂದು ಪ್ರಾಂತಿಕ ಸರಕಾರಗಳಿಗೆ ಹಿಂದುಸ್ತಾನ ಸರಕಾರ ಸೂಚನೆ ಕೊಟ್ಟಿದೆ. ಒತ್ತಾಯದ ಸಂಗ್ರಹದ ಪ್ರಶ್ನೆ ಸಾರ್ವಜನಿಕರ ಚಿತ್ತದಲ್ಲ ವಿಶೇಷ ಉದ್ವೇಗವನ್ನುಂಟು ಮಾಡಿದೆ. ಸರಕಾರದವರು ನಿರ್ದೇಶಿಸಿದ ನಿಯಂತ್ರಿತ ಬೆಲೆ ಬಹಳ ಕಡಿಮೆಯಾಯಿತೆಂದೂ ಅದನ್ನು ಏರಿಸಬೇಕೆಂದೂ ಹೇಳಲಾಗಿದೆ. ಆದರೆ ಬೆಲೆಮಟ್ಟವೆಂಬುದು ಸಮಸ್ತ ಹಿಂದುಸ್ತಾನದ ಪ್ರಶ್ನೆಯೆಂದು ಇದಕ್ಕೆ ಉತ್ತರ ಕೊಡಬೇಕಾಗುವದು. ಇದೀ ಮಟ್ಟವನ್ನೇ ಬದಲಿಸದೆ ಯಾವದೊಂದು ಪ್ರದೇಶದಲ್ಲಿ ಬೆಲೆಯನು ಹೆಚ್ಚಿಸುವದು ಸಾಧ್ಯವಿಲ್ಲ. ಮೇಲಾಗಿ ಯುಕ್ತ ಪ್ರಾಂತದಲ್ಲಿ ೪೦ ಸೇರಿನ ಮಣಕ್ಕೆ ನಿಯಂತ್ರಿತ ಬೆಲೆ ರೂ. ೧೯....೪—೦ ಇದ್ದು ಅದು ನಿಜವಾಗಿ ಕಡಿಮೆಯಲ್ಲ. ಅದು ಸಾಕಷ್ಟು ಉದಾರವಾದುದು. ಅದನ್ನು ಗೊತ್ತುಪಡಿಸುವಲ್ಲಿ ವ್ಯವಸಾಯದ ಮತ್ತು ಸಾಮಾನ್ಯ ಜೀವನದ ವೆಚ್ಚ ಹೆಚ್ಚಿರುವದನ್ನು ಗಮನಕ್ಕೆ ತಂದುಕೊಳ್ಳಲಾಗಿದೆ. ಒಂದೆ ಯುದ್ಧಪೂರ್ವದಲ್ಲಿ ಗೋದಿ ರೂ ಗೆ ೧೩ ಸೇರು ಮಾರುತ್ತಿತ್ತು; ನಿಯಂತ್ರಿತ ಬೆಲೆ ರೂಪಾಯಿಗೆ ನಾಲ್ಕು ಸೇರು. ಬೇಡಿಕೆಗಿಂತ ಪೂರೈಕೆ ಬಹಳ ಕಡಿಮೆಯಾಗುವದೆಂದು ಭಯವಿರುವ ಕಾರಣ ಕಳ್ಳಪೇಟೆಗಳಿರುವುದಾಗಿ ಅಲ್ಲಿ ಸ್ವಾರ್ಥೀ ಜನರು ತಮ್ಮ ವೈಯಕ್ತಿಕ ಅವಶ್ಯಕತೆಗಳಿಗಾಗಿ ಹೆಚ್ಚಿನ ಬೆಲೆ ಕೊಟ್ಟು ಕೊಳ್ಳುವುದೂ ನಿಶ್ಚಯ. ನಗರ ಪ್ರದೇಶಗಳಲ್ಲಿರುವ ಬಂಧು ಭಗಿನಿಯರ ಮತ್ತು ಗ್ರಾಮಾಂತರಗಳಲ್ಲಿರುವ ಭೂಮಿಯಿಲ್ಲದ ಬಡವರ ಹೊಟ್ಟೆಯನ್ನು ಹೊರೆಯುವದು ತಮ್ಮ ಸಾಮಾಜಿಕ ಮತ್ತು ರಾಷ್ಟ್ರೀಯ ಕರ್ತವ್ಯವೆಂದು ರೈತರು ಮನಗಂಡರೆ ಯಾವ ಒತ್ತಾಯವೂ ಅವಶ್ಯವಾಗಲಿಕ್ಕಿಲ್ಲ. ರೈತನು ಪ್ರತಿಯೊಂದು ದೃಷ್ಟಿಯಿಂದಲೂ "ಅನ್ನದಾತ"ನೇ ಸರಿ. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಆಹಾರ ವಸ್ತುಗಳನ್ನು ಕೂಡಿಹಾಕದಂತೆಯೂ ಕಳ್ಳ ಪೇಟೆಯಲ್ಲಿ ಮಾರದಂತೆಯೂ ಬದಲಿಗೆ ಸಾಧ್ಯವಾದಷ್ಟನ್ನು ಸರಕಾರದ ಉಗ್ರಾಣಗಳಿಗೆ ಒದಗಿಸುವಂತೆಯೂ ಅವನಿಗೆ ವಿನಂತಿ ಮಾಡಿಕೊಳ್ಳಬೇಕೆಂದು ನಿಮ್ಮನ್ನು ಪ್ರಾರ್ಥಿಸುವೆ. ಹಾಗೆ ಮಾಡಿದರೆ ಆಹಾರವನ್ನು ಬಡವ ಬಲ್ಲಿದರೆಲ್ಲರಿಗೂ ಸರಿಯಾಗಿ ಹಂಚುವಂತಾಗಿ ಉಪವಾಸ ಮತ್ತು ನಿರ್ಗತಿಕತೆಯನ್ನು ನಿವಾರಿಸಬಹುದಾಗಿದೆ. ನಿಮ್ಮ ಧ್ವನಿ ವಿಸ್ತಾರವಾಗಿ ಹಬ್ಬುವಂಥದು. ಆದುದರಿಂದಲೇ ನೀವು ಈ ಕೆಲಸ ಮಾಡಬೇಕೆಂದು ನನ್ನ ಬೇಡಿಕೆ. ನಗರ ಪ್ರದೇಶಗಳಿಗೆ ಸರಿಯಾದ ಪೂರೈಕೆ ದೊರೆಯುವಂತ ಮಾಡಲು ಅನೇಕ ಯೋಜನೆಗಳನ್ನು ಪರಿಶೀಲಿಸಲಾಗಿದೆ. ಆದರೆ ಯಾವುದೇ ಯೋಜನೆಯಿರಲಿ, ಬೆಳೆಯುವವನಿಂದ ಧಾನ್ಯವನ್ನು ಕೈಬಿಡುವಂತೆ ಕೇಳುವವೇ ಅವರ ತಿರುಳು. ಹಳ್ಳಿ ಮತ್ತು ನಗರ ಪ್ರದೇಶಗಳ ಜನರ ಹೊಟ್ಟೆ ಹೊರೆಯದಿದ್ದರೆ ಎಲ್ಲ ಬಗೆಯ ಗೊಂದಲಗಳೂ ಆಗುವದು ನಿಶ್ಚಯ. "ಹೆಚ್ಚು ಆಹಾರ ಬೆಳೆಯಿರಿ, ಹೆಚ್ಚು ಕಾಯಿಪಲ್ಲೆ ಬೆಳೆಯಿರಿ" ಸತ್ರಗಳಿಗೆ ಉತ್ತೇಜನವೀಯಲು ಯುಕ್ತ ಪ್ರಾಂತದಲ್ಲ ನಾವು ಸಾಧ್ಯವಿದ್ದುದನ್ನೆಲ್ಲ ಮಾಡುವೆವು. ನೀವು ಸೂಚಿಸಿದ ಅನೇಕ ಉಪಾಯಗಳನ್ನೆಲ್ಲ ಕೈಕೊಳ್ಳಲಾಗಿದೆ. ಸರಕಾರಿ ಆವಾರಗಳಲ್ಲಿರುವ ಎಲ್ಲ ಸರಕಾರಿ ಭೂಮಿಯನ್ನು ಉಳಲು ಆಜ್ಞಾಪಿಸಲಾಗಿದೆ. ಖಾಸಗಿ ಒಡೆಯರಿಗೂ ತಜ್ಞ ಸಲಹೆಯನ್ನು ಕೊಡಮಾಡಿರುವದಲ್ಲದೆ ಅವರಿಗೆ ಪುಕ್ಕಟೆಯಾಗಿ ಬೀಜವನ್ನೂ ನೀರಾವರಿ ಕಾಲಿವೆಗಳಿಂದ ನೀರನ್ನೂ ಒದಗಿಸಲಾಗುತ್ತಿದೆ. ಬಾವಿ ತೋಡುವದಕ್ಕೂ ಸಹಾಯ ಕೊಡುವದಾಗಿದೆ. ಆದರೆ ಇವೆಲ್ಲವನ್ನು ಹೇಳಿ ಮಾಡಿಯೂ ಸಾರ್ವಜನಿಕ ಸಹಕಾರವಿಲ್ಲದೆ ಹೆಚ್ಚಿನದೇನೂ ಸಾಧಿಸುವಂತಿಲ್ಲ. ಈ ಸಹಕಾರ "ಅನ್ನದಾತನು" ತನ್ನ ಶಕ್ತಿಮೀರಿ ಆಹಾರ ಧಾನ್ಯಗಳನ್ನು ದಾನಮಾಡುವ ರೂಪದಲ್ಲೇ ಒದಗಬೇಕಾಗಿದೆ."

ಡಾ. ಕಟಜು ಅವರ ಈ ಟಿಪ್ಪಣಿ ರೈತರ, ಅವರ ಸಲಹೆಗಾರರ ಹಾಗು ನಗರ ವಾಸಿಗಳ ಗಮನಕ್ಕೆ ಸರ್ವಥಾ ಅರ್ಹವಾಗಿದೆ. ಬರಲಿರುವ ಗಂಡಾಂತರವನ್ನು ಸದುಪಯೋಗ ಮಾಡಿಕೊಳ್ಳುವದು ಸಾಧ್ಯವಿದೆ. ಹಾಗೆ ಮಾಡಿದರೆ ಅದು ಪ್ರಚ್ಛನ್ನ ಅನುಗ್ರಹವೇ ಆಗಿ ರೂಪುಗೊಳ್ಳುವದು. ಇಲ್ಲವಾದರೆ ಅದೊಂದು ಅಭಿಶಾಪವಾಗುವದು, ಅಭಿಶಾಪವಾಗಿಯೆ ಉಳಿಯುವದು.

ಡಾ. ಕಟಜು ಅವರು ಹೊಣೆಗಾರ ಮಂತ್ರಿಯಾಗಿ ಇದನ್ನು ಬರೆದಿದ್ದಾರೆ ಆದುದರಿಂದ ಜನರು ಅವರನ್ನು ಇಡಬಹುದು, ತೆಗೆಯಬಹುದು ಅವರನ್ನು ತೆಗೆದುಹಾಕಿ ಅವರಗಿಂತ ಉತ್ತಮರಾದವರನ್ನು ಇಡಬಹುದು. ಆದರೆ ಎಂದಿನವರೆಗೆ ಜನತೆ ಆರಿಸಿದ ಮಂತ್ರಿಗಳು ಅವರ ಸೇವಕರಾಗಿ ಅಧಿಕಾರಸ್ಥಾನದಲ್ಲಿರುವ ವರೆಗೆ ಅವರ ಸೂಚನೆಗಳನ್ನು ಜನರು ಪಾಲಿಸಬೇಕಾಗಿದೆ. ಕಾಯಿದೆಯನ್ನು ಸೂಚನೆಗಳನ್ನು ಮುರಿಯುವದೆಲ್ಲ ಸತ್ಯಾಗ್ರಹವಲ್ಲ. ಅದು ಸತ್ಯಾಗ್ರಹದ ಬದಲು ದುರಾಗ್ರಹವಾಗುವ ಸಂಭವವೇ ಹೆಚ್ಚು.

ಹೊಸದಿಲ್ಲಿ — ಮೋ. ಕ. ಗಾಂಧಿ

೧೪-೪-೪೬.

## ಹಿಂದೀ ವಿರುದ್ಧ ಯುರೋಪಿಯನ್ ಪತ್ರಿಕಾ ಪ್ರತಿನಿಧಿಗಳು

ನಮ್ಮಲ್ಲಿಯ ಶ್ರೇಷ್ಠ ಪುರುಷರು ಪರದೇಶಿ ಪತ್ರಿಕಾ ಪ್ರತಿನಿಧಿಗಳ ಬಗ್ಗೆ ಅತ್ಯಂತ ಮೋಹತಾಳಿರುವರು. ಅನೇಕ ಸಂದರ್ಭಗಳಲ್ಲಿ ಅವರು ತಮ್ಮ ಪತ್ರಿಕಾ ಪರಿಷತ್ತುಗಳಲ್ಲಿ ಹಿಂದೀ ಪತ್ರಿಕಾಕರ್ತರನ್ನು ಕರೆಯದಷ್ಟು ಅವರು ಮೋಹಿತರಾಗುವರೆಂದು ಹಿಂದೀ ಪತ್ರಿಕಾಕರ್ತನೊಬ್ಬ ತಕರಾರು ಮಾಡುತ್ತಾನೆ. ನಾನಾದರೂ ಇದರಿಂದ ಅಲಿಪ್ತನಿರುವೆನೋ ಹೇಗೆಂಬ ಬಗ್ಗೆ ಆಶ್ಚರ್ಯವನ್ನೂ ವ್ಯಕ್ತಪಡಿಸುತ್ತಾನೆ. ನನ್ನಮಟ್ಟಿಗೆ ಹೇಳಬೇಕಾದರೆ, ನಾನು ಹೀಗೆಂದೂ ಪಂಕ್ತಿ ಪ್ರಪಂಚದ ಅಪರಾಧ ಮಾಡಿಲ್ಲೆಂದು ಹೇಳಬಲ್ಲೆ ಯಾರೂ ಇದನ್ನು ಅಲ್ಲಗಳೆಯುವಂತಿಲ್ಲ ಏಶಿಯದಲ್ಲಿ ಜನ್ಮತಾಳಿದ ತಪ್ಪಿಗಾಗಿ ಅತ್ಯಂತ ಕಷ್ಟವನ್ನು ನಾನು ಪಟ್ಟಿರುವೆನಾದ್ದರಿಂದ ಇಂಥ ಆಶಕ್ತಿತೆ ನನ್ನಲ್ಲಿ ಬರುವ ಸಂಭವವಿಲ್ಲ. ಪತ್ರಿಕೆಯವರು ತಮ್ಮನ್ನು ಬಹಿಷ್ಕರಿಸಬಹುದೆಂಬ ಅಂಜಿಕೆಯಿಂದಲಾದರೂ ಸಾರ್ವಜನಿಕ ಕಾರ್ಯಕರ್ತರು ಇದಕ್ಕೆಳಸಲಾರರಾದ್ದರಿಂದ ನನ್ನ ಮಿತ್ರರು ಹೇಳಿದಂತಹ ಯಾವ ಉದಾಹರಣೆಯೂ ನನ್ನ ದೃಷ್ಟಿಪಥಕ್ಕೆ ಬಂದಿಲ್ಲೆಂದು ನಾನು ಸ್ಪಷ್ಟವಾಗಿ ಹೇಳಲಿಕ್ಕೆ ಬೇಕಾಗಿದೆ. ಆದರೆ ಸಮುದ್ರದಾಚೆಗಿರುವ ದೇಶಗಳಿಗೆ ನಮ್ಮ ಸಂದೇಶಗಳು ಮುಟ್ಟುವದು ಅವಶ್ಯವೆಂದು ತೋರಿದಾಗ ಮಾತ್ರ ಪರದೇಶ ಪತ್ರಿಕಾ ಪ್ರತಿನಿಧಿಗಳಿಗೆ ಹಲವಾರು ಸಲ ವಿಶೇಷ ಸಂದರ್ಶನಗಳನ್ನು ನನಗೂ ಕೊಡಬೆ ಕಾಗುತ್ತದೆ. ಉಳಿದವರಿಗಾದರೂ ಹಾಗೆ ಮಾಡುವದು ಅವಶ್ಯವೆನಿಸುತ್ತದೆ. ಹೀಗೆ ಸಂಭವಿಸಿದ್ದು ಮಾತ್ರ ನಿಜ. ಸದ್ಯದ ಪರಿಸ್ಥಿತಿಯಲ್ಲಿ ಹಾಗೆ ಮಾಡದೆ ಗತ್ಯಂತರವಿಲ್ಲ. ಹಿಂದೀ ಪತ್ರಿಕಾ ಕರ್ತರಿಂದ ಬಹಿಷ್ಕೃತರಾಗುವದು ಮೂರ್ಖತನವಾಗುವಂತೆ ಪರದೇಶೀ ಪತ್ರಿಕೆಗಳಿಂದಲೂ ಬಹಿಷ್ಕೃತರಾಗುವದು ಹುಚ್ಚುತನವಾಗುವದು. ಅಲ್ಲದೆ ಹಿಂದೀ ಪತ್ರಿಕಾಕರ್ತರ ಮತ್ತು ಸಾರ್ವಜನಿಕ ಕಾರ್ಯಕರ್ತರ ಉದ್ದೇಶ ಮೊದಲಾದವುಗಳು ಒಂದೇ ಇದ್ದುದರಿಂದ ಹಿಂದೀ ಕಾರ್ಯಕರ್ತರು ಯಾವಾಗಲೂ ಹಿಂದೀ ಪತ್ರಿಕಾ ಸುದ್ದಿಗಾರರಿಗೆ ಪ್ರಾಶಸ್ತ್ಯ ಕೊಡಲಾಗುತಿವೆಂಬುದು ಪರಿಶ್ರಮಪಡುವ ಯಾರಿಗಾದರೂ ಗೊತ್ತಾಗದಿರದು. ಪತ್ರಿಕಾಕರ್ತರು ತಮ್ಮ ಸ್ವಂತದ ಇಲ್ಲವೆ ತಮ್ಮ ಒಡೆಯರ ಉದ್ದೇಶ ಸಾಧಿಸಲೆಳಸದೆ ಯಾವ ಧ್ಯೇಯವನ್ನಿಟ್ಟುಕೊಂಡಿರುವರೊ ಅದಕ್ಕೇ ಪ್ರಾಶಸ್ತ್ಯ ಕೊಡಬೇಕು; ಪ್ರತ್ಯಾರೋಪ ಇಲ್ಲವೆ ವ್ಯಕ್ತಿಟೀಕೆಯ ಕೆಳ ದರ್ಜೆಗೆ ಇಳಿಯಬಾರದು ಎಂದು ನಾನು ನನ್ನ ಹಿಂದೀ ಮತ್ತು ಪರದೇಶೀ ಪತ್ರಿಕಾ ಪ್ರತಿನಿಧಿ ಬಂಧುಗಳಿಗೆ ಒತ್ತಾಯಪಡಿಸುತ್ತೇನೆ.

ಹೊಸದಿಲ್ಲಿ — ಮೋ. ಕ. ಗಾಂಧಿ

೧೪-೪-೪೬

# ಜೋಕೆ ! ನೌಕರಶಾಹಿಯ ಯೋಜನೆಗಳಿಗೆ ಮೋಸ ಹೋಗಬೇಡಿರಿ

ಕಳೆದ ಸಪ್ಟೆಂಬರ ತಿಂಗಳಲ್ಲಿ ರಾಯಟರ ಸಂಸ್ಥೆಯವರು ವಾಶಿಂಗಟನ್ನಿನಿಂದ ಒಂದು ತಂತಿ ಕಳಿಸಿದರು. ಅದರಲ್ಲಿ ಹಿಂದುಸ್ತಾನದ ಹೊಣೆಗೆಟ್ಟ ಸರಕಾರದ ಯೋಜನೆಗನುಸಾರವಾಗಿ ೩೫೦೦,೦೦೦ ಟನ್ ಅಮೋನಿಯಂ ಸಲ್ಫೇಟ್ (ಕೃತಕಗೊಬ್ಬರ)ವನ್ನು ಸಿದ್ಧಗೊಳಿಸಲು ೪೦,೦೦೦,೦೦೦ ಡಾಲರ ಅಥವಾ ೧೩ ಕೋಟಿಗೂ ಹೆಚ್ಚು ರೂಪಾಯಿ ವೆಚ್ಚದಿಂದ ಒಂದು ಕಾರಖಾನೆ ಕಟ್ಟುವ ಸಂಬಂಧದಲ್ಲಿ ಒಂದು ಶಿಷ್ಟಮಂಡಲ ೫ ತಿಂಗಳ ಕಾಲ ಇಂಗ್ಲಂಡಿನಲ್ಲಿ ಉಳಿದುಕೊಂಡ ನಂತರ ಅಮೇರಿಕೆಗೆ ಬ್ರಿಟಿಶ ನಾಯಿಟ್ ಪದವೀಧರರೊಬ್ಬರ ಮುಂದಾಳ್ತನದಲ್ಲಿ ಸಾಗಲಿದೆಯೆಂದು ಹೇಳಲಾಗಿತ್ತು.

ಆದರೆ ಬ್ರಿಟಿಶ ಕೃಷಿ ವಿಶಾರದರೇ ಖಂಡಿಸಿರುವ ಈ ಬಗೆಯ ಕೃತಕಗೊಬ್ಬರದ ಉಪಯೋಗದಿಂದ ನಮ್ಮ ದೇಶದ ಭೂಮಿಯನ್ನು ವಿಷಪೂರಿತವಾಗಿ ಮಾಡುವದಕ್ಕಿಂತ ಭಯಂಕರವಾದ ಬೇರೆ ದುರ್ದೈವ ಹಿಂದುಸ್ತಾನದ ಜನತೆಯ ಪಾಲಿಗೆ ಬರುವದು ಸಾಧ್ಯವಿಲ್ಲ.

ಭೂಮಿಯಿಂದ ನಾವು ಸೆಳೆದುಕೊಂಡದ್ದನ್ನು ತುಂಬಿಕೊಡುವದು ಅವಶ್ಯವಿದೆ. ಭೂಮಿಯಿಂದ ಪೈರುಗಳನ್ನು ತೆಗೆಯುವದರಿಂದ ಅದರ ಸಾರದ ಶೋಷಣೆಯಾಗುತ್ತದೆ. ಅದನ್ನು ದನಕರುಗಳ ಸೆಗಣಿಯಿಂದಲೂ ಹುಲ್ಲುಗಳನ್ನು ಭೂಮಿಯಲ್ಲಿ ನುಗಿಸಿ ಉಳುವದರಿಂದಲೂ ತುಂಬಿಕೊಡಬೇಕು. (ಎಫ್. ಮ್ಯುಲ್ಲರರಿಂದ ಹಚಲ್ಪಟ್ಟ ಜೋಸೆಫ ಜೇಮ್ಸರ " 'Must we Starve" (ನಾವು ಉಪವಾಸ ಬೀಳಬೇಬೇಕೆ?) ಯನ್ನು ನೋಡಿರಿ) ಆದರೆ ಔಷಧ ಪ್ರಯೋಗದಿಂದ ದೇಹದ ಮೇಲಾಗುವ ಪರಿಣಾಮವೇ ರಾಸಾಯನಿಕ ಗೊಬ್ಬರಗಳಿಂದ ಭೂಮಿಯ ಮೇಲೆ ಆಗುತ್ತದೆ. ಅವು ತಾತ್ಕಾಲಿಕ ಉತ್ತೇಜನವನ್ನು ಉತ್ಪಾದಿಸಿ ಬಳಿಕ ಪ್ರತಿಕ್ರಿಯೆಯಲ್ಲಿ ಅವಸಾನಹೊಂದುತ್ತವೆ. ಹುಲುಸಾದ ಪೈರುಗಳೇನೋ ದೊರಕುತ್ತವೆ ಆದರೆ ನೆಲದಲ್ಲಿ ಅವು ರೋಗಗಳನ್ನೂ ನಿಸ್ಸಾರತೆಯನ್ನೂ ಉಂಟುಮಾಡುವವು "ಲಿವಿಂಗ್ ಸಾಯಿಲ್" (ಸಜೀವ ಭೂಮಿ) ಯೆಂಬ ಪುಸ್ತಕದಲ್ಲಿ ಬ್ಯಾಲ್‌ಫೋರ್ ಎಂಬವರು ಸರ್ ಅಲ್ಬರ್ಟ ಹವಾರ್ಡರ ಪರಿಪತ್ರವೊಂದರಿಂದ ಈ ಕೆಳಗಿನದನ್ನು ಎತ್ತಿಕೊಟ್ಟಿದ್ದಾರೆ

"ದಕ್ಷಿಣ ಫ್ರಾನ್ಸಿನಲ್ಲಿ ಕೃತಕ ಗೊಬ್ಬರಗಳ ಬಲದಿಂದ ದ್ರಾಕ್ಷಿಗಳನ್ನು ವಿಪುಲವಾಗಿ ಬೆಳೆಸಲಾಯಿತು. ಬಳ್ಳಿಗಳಿಗೆ ಬಂದ ರೋಗಗಳು ಅನೇಕ. ಅವುಗಳನ್ನು ವಿಷಸೇಚನದಿಂದ ಪ್ರತಿರೋಧಿಸಲಾಯಿತು.

"ಆದರೆ ಅತ್ತ ಬಲುಚಿಸ್ತಾನದಲ್ಲಿ ದ್ರಾಕ್ಷೆತೋಟಗಳಿಗೆ ಯಾವಾಗಲೂ ಮನೆ ಗೊಬ್ಬರವನ್ನೇ ಹಾಕಲಾಗುತ್ತದೆ. ಕೃತಕ ಗೊಬ್ಬರಗಳ ಬಳಕೆಯಿಲ್ಲ ಅಲ್ಲಿನ ತೋಟಗಳಿಗೆ ಬದನಿಕೆ, ಹುಳ ಹುಪ್ಪಡಿಗಳನ್ನು ಕೊಲ್ಲುವ ಔಷಧಗಳು ಬೇಕಾಗುವದೇ ಇಲ್ಲ. ಏಕೆಂದರೆ ಅಲ್ಲಿ ರೋಗಗಳಿರುವುವೇ ಅಪರೂಪ."

ಇಂಗ್ಲಂಡಿನಲ್ಲಿ ಹೆಚ್ಚುತ್ತಿರುವ ಬೆಳೆ ರೋಗಗಳಿಗೆ ಕೃತಕಗೊಬ್ಬರಗಳೇ ಕಾರಣವೆಂದು ಬ್ರಿಟಿಶ ಲೇಖಕರು ಸಾಧಿಸುತ್ತಿರುವರು. ಜೇಮ್ಸರು ಲಾರ್ಡ ಲೆಮಿಂಗಟನ್ನರ ಈ ಕೆಳಗಿನ ಹೇಳಿಕೆಯನ್ನು ಉದಾಹರಿಸಿದ್ದಾರೆ.

"ಇಪ್ಪತ್ತು ವರ್ಷ ಕೆಳಗೆ ಆಲೂಗಡ್ಡೆ ಪೈರಿಗೆ ಮೈಲುತುತ್ತೆ (ಕಾಪ್ಪರ ಸಲಫೇಟ) ಯ ದ್ರಾವಕವನ್ನು ವರ್ಷಕ್ಕೊಂದು ಬಾರಿ, ತಪ್ಪಿದರೆ ಮೂರು ಬಾರಿ ಸಿಂಪಡಿಸುವದು ಸಾಕಾಗುತಿತ್ತು. ಆದರೆ ಈಗ ಒಂದು ಪೈರಿಗೆ ಹನ್ನೆರಡರಿಂದ ಹದಿನೈದು ಬಾರಿ ಸಿಂಪಡಿಸಬೇಕಾಗುತ್ತದೆ. ಇದೆಲ್ಲದಕ್ಕೂ ಪ್ರಾಣಿಜನ್ಯ ಗೊಬ್ಬರದ ಅಭಾವ ಮತ್ತು ಬೆಳೆಗಳನ್ನು ತೆಗೆವಲ್ಲಿ ಯೋಗ್ಯ ಪರ್ಯಾಯವಿಲ್ಲದಿರುವದು ಕಾರಣವೆಂದು ಹೇಳಬಹುದು." (ಫ್ಯಾಮಿನ್ ಇನ್ ಇಂಗ್ಲಂಡ — ಇಂಗ್ಲಂಡಿನಲ್ಲಿ ಬರಗಾಲ.)

ರಾಸಾಯನಿಕ ದ್ರವ್ಯಗಳ ಸೇಚನದಿಂದ ಬೆಳೆಗಳಿಗೆ ಬಾಧಕವಾಗುವದಲ್ಲದೆ ಭೂಮಿಯ ಸಾರದ ಪುಷ್ಟಿಯೂ ಕೆಲವು ಬಗೆಗೆ ಕಡಿಮೆಯಾಗುತ್ತದೆ.

ಲಾರ್ಡ ಲಿಮಿಂಗಟನ್ನರ ಅಭಿಪ್ರಾಯದಲ್ಲಿ ಕೃತಕ ಗೊಬ್ಬರಗಳು ಬಹಳ ಅಪಾಯಕರವಾಗಿವೆ "ಜೀವನದ ವಿಕಾಸವು ಬೆಳವಣಿಗೆಯನ್ನೆಷ್ಟೋ ಅಷ್ಟೇ ಕ್ಷಯವನ್ನೂ ಅವಲಂಬಿಸಿದೆ. ಎಲ್ಲಿ ಪ್ರಾಣಿಜನ್ಯ ವಸ್ತುಗಳು ಸರಿಯಾಗಿ ಕ್ಷಯಿಸಿ ಸಸ್ಯರೂಪ ಬುರುಸಾಗಿ ಮಾರ್ಪಡುವವೋ ಅಲ್ಲಿಯೇ ಆರೋಗ್ಯಶಾಲಿ ಬೆಳವಣಿಗೆ ಸಾಧ್ಯ. ಇದು ಮಣ್ಣಿನ ಜೀವಾಣುಗಳ ಕ್ರಿಯೆಯಿಂದಲೇ ಸಾಧಿಸಬಲ್ಲದು. ಅಮೋನಿಯಾ ಸಲ್ಫೇಟ, ನೈಟ್ರೋಚಾಕ, ಪೊಟೇಶ ಮೊದಲಾದ ಲವಣಗಳನ್ನು ಸಿಕ್ಕಸಿಕ್ಕಂತೆ ಬಳಸಿದರೆ ಈ ಜೀವಾಣುಗಳು ನಾಶವಾಗಿ ಹೋಗುವವು. ಹೀಗೆ ಭೂಮಿಯಲ್ಲಿ ಬುರುಸಿಲ್ಲದಿರುವಾಗ ಸಸ್ಯಗಳು ಆರೋಗ್ಯದಿಂದ ಬೆಳೆಯಲಾರವು.

ಬೆಳೆ ರೋಗಗಳು ಹೇಗೋ ಹಾಗೆಯೆ ಮಾನವೀ ಮತ್ತು ಮೃಗಗಳ ರೋಗಗಳು ಕೂಡ ಕೃತಕ ಗೊಬ್ಬರಗಳಿಂದ ಉದ್ಭವಿಸುತ್ತವೆ. ಇಂಗ್ಲಂಡಿನಲ್ಲಿ ವರ್ಷಕ್ಕೆ ತಲಾ ೬ ಪೌಂಡುಗಳಂತೆ ಔಷಧಗಳಿಗೆ ವೆಚ್ಚವಾಗುತ್ತವೆ. ಮತ್ತು ಗೃಹ್ಯ ಪ್ರಾಣಿಗಳ ಚಿಕಿತ್ಸೆಗಾಗಿ ರೈತನಿಗೆ ಒಟ್ಟು ಆ ಪ್ರಾಣಿಗಳಿಂದ ದೊರೆಯುವ ವಾರ್ಷಿಕ ಸಂಪತ್ತಿಯಲ್ಲಿ ನೂರಕ್ಕೆ ೧೦ರಷ್ಟು ವೆಚ್ಚವಾಗುತ್ತದೆಂದು ಅಂದಾಜು ಮಾಡಲ್ಪಟ್ಟಿದೆ.

ದನಕರುಗಳ ಕಾಲು ಮತ್ತು ಬಾಯಿ ರೋಗಗಳು ಇಂಗ್ಲಂಡಿನಲ್ಲಿ ಬಹಳವಾಗಿ ಹಬ್ಬಿವೆ. ಈ ಪಿಡುಗು ಹಬ್ಬಿರುವ ಪ್ರದೇಶದ ೧೫ ಮೈಲಿ ಸುತ್ತಳತೆಯ ಪ್ರದೇಶದಲ್ಲಿ ರೋಗ ತಗಲಿದ ಪ್ರಾಣಿಗಳ ಸಂಚಾಲನೆಗೆ ಪ್ರತಿಬಂಧವಿರುವದರಿಂದ ಗ್ರಸ್ತ ಮೃಗಗಳನ್ನು ಕಟುಕರ ಕಡೆಗೆ ಕಳಿಸಲಾಗುತ್ತದೆ. ಆದರೆ ಹಿಂದುಸ್ತಾನದಲ್ಲಿ ಸೆಗಣಿ-ಹಸುರೆಲೆ ಮಿಶ್ರ ಗೊಬ್ಬರದಲ್ಲಿ ಬೆಳೆದ ಆಹಾರದಿಂದ ಪೋಷಿಸಲ್ಪಟ್ಟ ಒಂದು ಎತ್ತು ರೋಗಗ್ರಸ್ತ ಪ್ರಾಣಿಗಳೊಡನೆ" ಮೂಗಿಗೆ ಮೂಗು ತಿಕ್ಕುವರೆ ಸಹಿತ" ಆ ಜಾಡ್ಯ ಅದಕ್ಕೆ ಅಂಟಲಾರದೆ ಹೋಯಿತೆಂದು ಹವಾರ್ಡರು ಹೇಳುತ್ತಾರೆ.

ವರದಿಗಾರರೊಬ್ಬರ ಪತ್ರದಿಂದ ಬಲ್‌ಫೋರರ ಈ ಕೆಳಗಿನದನ್ನು ಎತ್ತಿಕೊಟ್ಟಿದ್ದಾರೆ: "ನೈಟ್ರೇಟ್ ಮತ್ತು ಫಾಸ್ಫೇಟಗಳಿಂದ ಅತಿ ಶೀಘ್ರವಾಗಿ ಬೆಳೆಸಿದ ಕ್ಯಾಬೇಜಗಳು ಒಂದು ವಿಚಿತ್ರ "ಅಸಮರ್ಪಕ ಬಣ್ಣ ತಾಳುತ್ತವೆ. ಮೊಲಗಳಿಗೆ ಕೊಡುವ ಆಹಾರದಲ್ಲಿ ಅರ್ಧಾಂಶಕ್ಕಿಂತ ಹೆಚ್ಚು ಈ ಜಾಗೆಯದಾಗಿದ್ದರೆ ಆ ಮೊಲಗಳು ಸತ್ತುಹೋಗುವವು. ಫಾಸ್ಫೇಟು ಒಂದು ನಿರ್ದಿಷ್ಟ ಪ್ರಮಾಣವನ್ನು ಮೀರಿ ಹೋದರೆ ಅಂಥ ಮೊಲಗಳು ವಿವರ್ಣವಾದ ಹಸುರುತನವನ್ನು ಪಡೆಯುತ್ತವೆ. ಅಲ್ಲದೆ ಅದನ್ನು ಕಾಡು ಮೊಲಗಳು ಪರಿತ್ಯಜಿಸಿ ಹೋಗಿಬಿಡುತ್ತವೆ" ಮಾರಾಟಗಾರರು ಇದನ್ನೇ ಒಂದು ಗುಣವೆಂದು ಕೊಂಡು ಕೊನೆಯುವರು. "ನಮ್ಮ ಕರಗುವ ಫಾಸ್ಫೇಟ ಗೊಬ್ಬರವನ್ನು ಬಳಸಿ ಮೊಲಗಳನ್ನು ದೂರೀಕರಿಸಿರಿ" ಎಂದೋ, "ನೈಟ್ರೋ ಚಾಕ ಸಾಕಷ್ಟು ಬಳಸಿರಿ, ಅಂದರೆ ಎತ್ತರದ ಹರಿವೆ ಬೆಳೆಯುತ್ತೀರಿ. ಅದನ್ನು ಮೊಲಗಳು ಮುಟ್ಟುವದೇ ಇಲ್ಲ; ಮುಟ್ಟಿದರೆ ಮಡಿಯುವವು" ಎಂದೋ ಜಾಹೀರಾತು ಮಾಡುವದನ್ನು ಕಾಣುತ್ತೇವೆ.

ಕೃತಕ ಗೊಬ್ಬರದಿಂದ ಪೋಷಿಸಲ್ಪಟ್ಟ ಹೊಲದಲ್ಲಿ ಮೇಯಲು ದನಕರುಗಳು ಒಪ್ಪಲಿಲ್ಲವೆಂದ ತಿಳಿದು ಬಂತು.

ಒಂದು ಶಾಳೆಯಲ್ಲಿ ಮೊದಲು ಕೃತಕ ಗೊಬ್ಬರದಿಂದಲೂ ನಂತರ ಇಂದೂರ ಸೆಗಣಿ ಗೊಬ್ಬರದಿಂದಲೂ ಕಾಯಿಪಲ್ಲೆಗಳನ್ನು ಬೆಳಸಿದ ಒಂದು ಉದಾಹರಣೆಯನ್ನು ಬಾಲ್‌ಫೋರರು ಕೊಟ್ಟಿದ್ದಾರೆ. ಮೊದಲು ನೆಗಡಿ, ಗೊಬ್ಬರ, ಸಿಡುಬ ಮೊದಲಾದ ರೋಗಗಳು ಶಾಲೆಯಲ್ಲೆಲ್ಲ ಹಬ್ಬುತ್ತಿತ್ತೆಂದೂ ಆ ಮೇಲೆ ಅಂಥ ರೋಗಗಳು ಬಂದಾಗ ಹೊರಗಿನಿಂದ ಗ್ರಸ್ತವಾಗಿ ಬಂದ ರೋಗಿಗಳನ್ನು ಬಿಟ್ಟು ಬೇರೆಯವರಿಗೆ ಹಬ್ಬುವದು ವಿರಳವಾಯಿತೆಂದೂ ಆ ಶಾಲೆಯ ಹೆಡ್ ಮಾಸ್ತರರು ಹೇಳುತ್ತಾರೆ. ಆ ಕಾಯಿಪಲ್ಲೆಗಳ ಗುಣ ರುಚಿಗಳೂ ಸುಧಾರಿಸಿದ್ದು ಕಂಡು ಬಂತು.

ಪೋಷಕ ದ್ರವ್ಯಾಭಾವದಿಂದ ಉಂಟಾಗುವರಿಂದ ರೋಗಗಳನ್ನು ಕುರಿತು ಹಿಂದುಸ್ತಾನದಲ್ಲಿ ವಿಚಾರಣೆ ನಡೆಸಿದ ಮ್ಯಾಕ್‌ಕ್ಯಾರಿಸನ್ನರು ಹಟ್ಟಿಯ ಗೊಬ್ಬರದಿಂದ ಪೋಷಿತವಾದ ಹೊಲದಲ್ಲಿ ಬೆಳೆದ ಗೋದಿಯ ಪೋಷಕ ಯೋಗ್ಯತೆ, ಪೂರ್ಣವಾಗಿ ರಾಸಾಯನಿಕ ಗೊಬ್ಬರಗಳಿಂದ ಬೆಳೆದ ಗೋದಿಗಿಂತ ನೂರಕ್ಕೆ ೧೭ ರಷ್ಟು ಹೆಚ್ಚಾಗಿದೆಯೆಂದು ಕಂಡು ಹಿಡಿದರು. ಎರಡನೆಯ ಪರಿಸ್ಥಿತಿಯಲ್ಲಿ ಬೆಳೆದ ಗೋದಿಯಲ್ಲಿ, ಮನುಷ್ಯನ ಮತ್ತು ಅವನ ದನಕರುಗಳ ರಕ್ತಕ್ಕೆ ಅಂಟು ರೋಗಗಳನ್ನು ಪ್ರತಿಭಟಿಸುವ ಶಕ್ತಿಯನ್ನು ಕೊಡುವ "ಅ" ಜೀವಸತ್ವದ ಕೊರತೆಯಿದ್ದದ್ದು ಗೊತ್ತಾಯಿತು.

ಮ್ಯಾಕ್‌ಕ್ಯಾರಿಸನ್ನರ ಪರಿಶೀಲನೆಯ ಫಲವಾಗಿ ಸೆಗಣಿ ಗೊಬ್ಬರದಿಂದ ಬೆಳೆದ ಧಾನ್ಯದಲ್ಲಿರುವ ಬ-ಜೀವಸತ್ವ ೧೦೦ ಅಂಶ ಇದ್ದರೆ ಕೃತಕ ಗೊಬ್ಬರದಿಂದ ಪೋಷಿಸಿದ ಧಾನ್ಯದಲ್ಲಿ ಬರಿ ೬೬ ಅಂಶ ಮಾತ್ರ ಇದೆಯೆಂದೂ ತಿಳಿದು ಬಂತು.

ನೌಕರಶಾಹಿಯ ಯೋಜನೆಗಳಲ್ಲಿ ಇನ್ನೊಂದು, ಕೃಷಿಕರ್ಮಕ್ಕೆ ಯಂತ್ರಗಳನ್ನು ಪಯೋಗಿಸುವದು ಆದರೆ ಲಾರ್ಡ ನಾರ್ಥಬೋರ್ನರು ತಮ್ಮ "ಭೂಮಿಯ ಕಡೆ ನೋಡಿರಿ" (ಲುಕ್ ಟು ದಿ ಲ್ಯಾಂಡ್) ಪುಸ್ತಕದಲ್ಲಿ ಹೀಗೆ ಹೇಳಿದ್ದಾರೆ: "ಕೃಷಿಯ ಯಂತ್ರೀಕರಣವೊಂದು ಭಯಾನಕ ಬೆಲೆಯಾಗಬಲ್ಲದು. ಅದರಿಂದ ಅಭೂತಪೂರ್ವ ಪ್ರಮಾಣದಲ್ಲಿ ಭೂಮಿಯನ್ನು ಮರುಭೂಮಿಯನ್ನಾಗಿ ಮಾಡಬಲ್ಲಂಥ ಭೂಶೋಷಣೆ ಸಾಧ್ಯವಾಗುವದು."

ತಮ್ಮ ಕೃಷಿಕರ್ಮವನ್ನು ಯಂತ್ರಗಳಿಂದ ಸಾಗಿಸಿದ ಬ್ರಿಟಿಶ ರೈತರು ನಮಗೆ ಹಲವೊಂದು ಪಾಠ ಕಲಿಸಬಲ್ಲವರಾಗಿದ್ದಾರೆ. ತಾವು ಮಾಡಿದ ತಪ್ಪುಗಳೆಂದು ಅವರೇ ಒಪ್ಪಿಕೊಂಡ ಸಂಗತಿಗಳಿಂದ ಮನಸಿದ್ದರೆ ನಾವು ಪಾಠ ಕಲಿಯಬಹುದು.

ಮೊದಲನೆಯದಾಗಿ, ಮಣ್ಣಿನ ಆರೋಗ್ಯವನ್ನು ಕಾಪಾಡುವದಕ್ಕೆ ಬಾಧೆಯೊಡ್ಡುವಷ್ಟು ಭಾರವಾಗಿವೆ ಈ ಯಂತ್ರಗಳು. ಹುಲ್ಲನ್ನು ಕೊಯ್ಯಲು ಮೋಟರ್-ಕೊಯ್ಮೆಯಂತ್ರವನ್ನು ಉಪಯೋಗಿಸಿದರೆ ಹುಲ್ಲುಗಾವಲುಗಳು ಕೆಡುದು ತಿಳಿದು ಬಂದಿದೆ.

ಹಲವು ಪಾಳಗಳುಳ್ಳ ಯಾಂತ್ರಿಕ ನೇಗಿಲ ಓಟ ಅತಿರೇಕ ತೀವ್ರವಾಗಿರುತ್ತದೆ. ಒಂದೇ ಪಾಳದ ಎತ್ತಿನ ಇಲ್ಲವೆ ಕುದುರೆಯ ನೇಗಿಲನ್ನು ಪಯೋಗಿಸಿದರೆ ದೊಡ್ಡ ಹೊಲವೊಂದರ ಉಳುವೆ ಮುಗಿಸಲು ಹಲವು ದಿನಗಳು ಬೇಕಾಗುತಿದ್ದವು ಕ್ರಿಮಿಕೀಟಗಳಿಗಾಗಿ ಆತುರವಾಗಿದ್ದ ಹಕ್ಕಿಗಳ ಗುಂಪಿಗೆ ಗುಂಪೆ ನೇಗಿಲ ಹಿಂದೆ ಸಾಗುತ್ತಿದ್ದವು. ಆದರೆ ಹಿಂದೆ ಒಂದು ಇಡಿ ವಾರ ಹಿಡಿಯುತಿದ್ದ ಕೆಲಸ ಈಗ ಒಂದು ದಿನದಲ್ಲಿ ಮುಗಿದುಹೋಗುತ್ತಿರುವುದರಿಂದ ಹಕ್ಕಿಗಳಿಗೆ ನೆಲವನ್ನು ಸ್ವಚ್ಛ ಮಾಡಲು ಸಮಯವೇ ಇಲ್ಲವಾಗಿದೆ. ಆದುದರಿಂದ ಬ್ರಿಟಿಶ ಬೇಸಾಯಗಾರರು ನೆಲದಲ್ಲಿ ವಿನಾಶಕ ಕ್ರಿಮಿಗಳು ಹೆಚ್ಚುತ್ತಿವೆಯೆಂದು ದೂರಿಕೊಳ್ಳುತ್ತಿದ್ದಾರೆ.

ಆದರೆ ಮಣ್ಣಿನ ಸ್ವಚ್ಛತೆ ಕೆಡುತ್ತಿರುವದಷ್ಟಕ್ಕೆ ಇದರ ಕತೆ ಮುಗಿಯಲಿಲ್ಲ. ಭೂಮಿಯ ಸಾರನಾಶ ಇನ್ನಷ್ಟು ಚಿಂತಾಜನಕವಾಗಿದೆ. ಕುದುರೆಯೋ ಎತ್ತೋ ಹೊಲದ ಮೇಲೆ ಸಾಗುತಿದ್ದಾಗ ಅವು ನೆಲದ ಸಾರ ಸಮೃದ್ಧಿಯನ್ನು ಹೆಚ್ಚಿಸುತ್ತಿದ್ದವು. ಆದರೆ ಉಳುಮೆಯಂತು ಹೊಲದ ಮೇಲೆ ಹಾಯುವಾಗ ಏನನ್ನೂ ಕೊಡುವದಿಲ್ಲ. ಬ್ರಿಟಿಶ ಸೈನ್ಯ ಮತ್ತು ಬ್ರಿಟಿಶ ವ್ಯವಸಾಯ ಕ್ಷೇತ್ರದಿಂದ ಕಳೆದ ೨೦ ವರ್ಷಗಳಲ್ಲಿ ೫ ಲಕ್ಷ ಕುದುರೆಗಳು ಕಡಿಮೆಯಾಗಿವೆ. ಪರಿಣಾಮವಾಗಿ ಇಂಗ್ಲಂಡಿನಲ್ಲಿ ಹತ್ತು ಲಕ್ಷ ಎಕರೆ ಭೂಮಿಗೆ ದೊರೆಯುತ್ತಿದ್ದ ಲದ್ದಿ ಗೊಬ್ಬರ ಇಲ್ಲದಂತಾಗಿದೆ. ಅಷ್ಟು ಮಟ್ಟಿಗೆ ಭೂಮಿಯ ಹುಲುಸತನ ಇಳಿದುಹೋದಂತಾಯಿತು.

ಇಂಗ್ಲಂಡಿನಲ್ಲಿ ಸಸ್ಯ-ಮೃಗ-ಮನುಷ್ಯ ಚಕ್ರ ಹಲವು ಬಗೆಯಾಗಿ ಬಿರುಕು ಬಿಟ್ಟಿದೆ. ಇದರ ಪರಿಣಾಮ ಎಲ್ಲ ಸಂದರ್ಭಗಳಲ್ಲಿಯೂ ದುಷ್ಟವಾಗಿಯೇ ಇದ್ದುದು ಕಂಡು ಬಂದಿದೆ "ಸಾಯಿಲ್ ಅ್ಯಂಡ ಸೆನ್ಸ" (ನೆಲವೂ ವಿವೇಕವೂ) ಎಂಬ ಪುಸ್ತಕದಲ್ಲಿ (ಫೇಬರ) ಮೈಕೇಲ ಗ್ರಾಹ್ಯಾಮರು ತೋರಿಸಿಕೊಟ್ಟಂತೆ ಬ್ರಿಟಿಶ ಗೃಹಿಣಿ ತನ್ನ ಕುಟುಂಬದ ಆಕಾರವನ್ನು ಚಿಕ್ಕದಾಗಿಡುತಿರುವದರಿಂದ ಅವಳು ಕುರುಬರನ್ನು ನಿರುದ್ಯೋಗಿಗಳನ್ನಾಗಿ ಮಾಡಿ ರೈತರನ್ನು ದಿವಾಳಿ ಎಬ್ಬಿಸುವಂತೆ ಮಾಡಿದ್ದಾಳೆ ವರ್ಷಕ್ಕೆ ೧೦ ಲಕ್ಷದಂತೆ ಕುರಿಗಳ ಸಂಖ್ಯೆ ಕಡಿಮೆಯಾಗುತ್ತಿದೆ. ಆದ್ದರಿಂದ ಬ್ರಿಟನಕ್ಕೆ ಗೋದಿಯ ಅತ್ಯಂತಿಕ ಅವಶ್ಯಕತೆಯಿದ್ದರೂ ಭೂಮಿಯನ್ನು ಮೆಟ್ಟಿ ಗೊಬ್ಬರವನ್ನು ಕೊಡುವ ಕುರಿಗಳು ಸಾಕಷ್ಟಿಲ್ಲವಾಗಿವೆ.

ವಾಸ್ತವಿಕವಾಗಿ ವೈಜ್ಞಾನಿಕವೆಂದು ಕರೆಸಿಕೊಳ್ಳುವ ವ್ಯವಸಾಯ ಪದ್ಧತಿಯಿಂದ ಅತಿರೇಕ ಶೋಷಣೆಯಾಗುವ ಕಾರಣ ಅದು ಜಗತ್ತಿನಲ್ಲೆಲ್ಲ ಕೊನೆಯಲ್ಲಿ ವಿಘಾತಕವಾಗಿಯೆ ಪರಿಣಮಿಸುವದು. ಉದಾಹರಣೆಗಾಗಿ "ರೇಪ್ ಆಫ ದಿ ಅರ್ಥ" (ಭೂಮಿಯ ಮೇಲೆ ಅತ್ಯಾಚಾರ) ದಲ್ಲಿ ಹೇಳಿರುವಂತೆ ಇಜಿಪ್ತದಲ್ಲಿ ಕುಶಲತರವಾದ ತಂತ್ರವನ್ನು ಉಪಯೋಗಿಸುತ್ತ ಹೋದಂತೆ ಮಣ್ಣಿನ ಗುಣ ಇಳಿಮುಖವಾಗುತ್ತ ಹೋಯಿತು.

ಇಂಗ್ಲಂಡಿನಲ್ಲಿ ಕೃಷಿಕರ್ಮಕ್ಕೆ ಯಂತ್ರಗಳು ಬಳಕೆಗೆ ಬಂದಂದಿನಿಂದ ಪೊದರು ಬೇಲಿಗಳು ದೊಡ್ಡ ಪ್ರಮಾಣದಲ್ಲಿ ನಾಶವಾಗಿವೆ ಇದರಿಂದಲೇ ಕ್ರಿಮಿಕೀಟಕಗಳ ಪಿಡುಗು ಹೆಚ್ಚಿದೆಯೆಂದು ಇ. ಬಿ. ಬೆಲಫೋರರ ಅಭಿಪ್ರಾಯ ಕ್ರಿಮಿಕೀಟಕಗಳನ್ನು ತಿಂದು ಬಾಳುವ ಚಿಕ್ಕಪುಟ್ಟ ಹಕ್ಕಿಗಳಿಗೆ ಪೊದರು ಬೇಲಿಗಳು ನಾಶವಾದ ಮೇಲೆ ಆಶ್ರವೇ ಇಲ್ಲವಾಗಿವೆಯೆಂದು ಅವರು ಹೇಳುತ್ತಾರೆ. ಹಿಂದೆ ಇಂಗ್ಲಂಡಿನಲ್ಲಿ ಹೊಲಗಳು ಚಿಕ್ಕವಾಗಿದ್ದವು ಪೊದರು ಬೇಲಿಗಳ ಸಾಲು ವಿಪುಲವಾಗಿದ್ದು ನಡುನಡುವೆ ಮರಗಳೂ ಇದ್ದವು ಇಂಗ್ಲಂಡದ ಬೀಸುಗಾಳಿಯ ಹವೆಯಲ್ಲಿ ಭೂಮಿಯ ಸಾರವನ್ನು ಯಥಾಸ್ಥಿತಿಯಾಗಿ ಉಳಿಸಿ ಅದರ ಉತ್ಪಾದಕತೆಯನ್ನು ಹೆಚ್ಚಿಸಲು ಈ ಪೊದರು ಬೇಲಿಗಳು ಒಳ್ಳೆ ಸಹಾಯ ಮಾಡುತ್ತಿದ್ದವು. ಆದರೆ ಈಗ ಆಧುನಿಕ ಯಂತ್ರೀಕೃತ ವ್ಯವಸಾಯ ಪದ್ಧತಿಗೆ ಸರಿಹೋಗಲೆಂದು ಹೊಲಗಳ ಆಕಾರ ದೊಡ್ಡದಾಗಿ ಮಾಡಲ್ಪಟ್ಟಿದೆ.

ಬ್ರಿಟಿಶ ರೈತರ ಅನುಭವ ಹೀಗಿರುತ್ತಾ, ರಶಿಯಾಕ್ಕೆ ೫೦೦೦೦ ಉಳುವೆ ಯಂತ್ರ (ಟ್ರ್ಯಾಕ್ಟರ) ಗಳನ್ನು ಫ್ರಾನ್ಸಿಗೆ ಮತ್ತೆ ೨೦೦೦೦ ವನ್ನೂ ಒದಗಿಸುತ್ತಿರುವ ಅಮೇರಿಕೆ ಹಿಂದುಸ್ತಾನಕ್ಕೆ ಮಾತ್ರ ೫೦೦ ಟ್ರ್ಯಾಕ್ಟರುಗಳನ್ನು ಕೂಡ ಒದಗಿಸಲಾರದೆ ಹೋದುದು ಪ್ರಚ್ಛನ್ನ ಅನುಗ್ರಹವೆಂದೆ ಹೇಳಬಹುದಲ್ಲವೆ ?

ನ. ಇ. ಅವರು ಸಾಯುವುದಕ್ಕೆ ಎರಡು ವರ್ಷ ಮೊದಲು ಅಮೇರಿಕೆಯ ಸರಕಾರದವರು ಅವರನ್ನು ತಮ್ಮಲ್ಲಿಗೆ ಬರಮಾಡಿ ವ್ಯವಸಾಯದಲ್ಲಿರುವ ಕುಂದುಕೊರತೆಗಳೆನೆಂದು ಕಂಡು ಹಿಡಿಯಬೇಕೆಂದು ಕೇಳಿಕೊಂಡರು ಉಪಕರಣಗಳೆಲ್ಲ ಪರಿಪೂರ್ಣವಾಗಿದ್ದವು. ಆದರೆ ಕೆಲಸಗಾರರು ಕೆಲಸ ಸಾಗಿಸಲು ಒಪ್ಪುತ್ತಿರಲಿಲ್ಲವೆಂದು ದೂರು. ಎ. ಇ. ಅತಿಯ ಸಂಘಟನೆಯಿಂದ ಕೃಷಿಕರ್ಮದಲ್ಲಿದ್ದ "ಆತ್ಮ" ವೇ ನಾಶವಾಗಿತ್ತು, ಯಂತ್ರಗಳು ಮನುಷ್ಯನಿಗೂ ನೆಲಕ್ಕೂ ನಡುವೆ ಕೈಹಾಕಿದ್ದರಿಂದ ಮನುಷ್ಯನು ಕೃಷಿಕರ್ಮದಲ್ಲಿಯ ಆಸಕ್ತಿಯನ್ನೇ ಕಳೆದುಕೊಂಡಿದ್ದಾನೆ. ಇದು ಎ. ಇ ಅವರು ಕಂಡು ಹಿಡಿದ ಕಾರಣ.

ನಾರ್ಥಬೋರ್ನರ ಈ ಕೆಳಗಿನ ಮಾತುಗಳನ್ನು ನಾವು ನನಪಿನಲ್ಲಿಡೋಣ.

"ಬೇರೆಲ್ಲ ಕೈಗಾರಿಕೆಗಳಲ್ಲಿ ಹೇಗೋ ಹಾಗೆಯೆ ಕೃಷಿಯಲ್ಲಿಯೂ ಅತ್ಯುತ್ತಮವಾದುದನ್ನು ಕೈಗೆಲಸದಿಂದಲೇ ಹುಟ್ಟಿಸಬಹುದಾಗಿದೆ. ಅತ್ಯುತ್ತಮಕ್ಕಿಂತ ಕಡಿಮೆಯದು ನಿಷ್ಫಲವೇ ಸರಿ."

## ಸರ್ ಕ್ರಿಪ್ಸರಿಗೆ ಆಸೆ ಎಡರು ತೊಡರು ಮಾಯವಾದುವು ?

ಸರ್ ಸ್ಟ್ಯಾಫರ್ಡ ಕ್ರಿಪ್ಸರು ೧೪ ನೇ ತಾರೀಕು ಮುಂಜಾನೆ ಗಾಂಧೀಜಿಯವರನ್ನು ಭೆಟ್ಟಿಯಾಗಿ ಸುಮಾರು ೫೦ ಮಿನಿಟುಗಳ ವರೆಗೆ ಮಾತುಕತೆಯಾಡಿದರು. ತಾವು ಕಾಶ್ಮೀರಕ್ಕೆ ಹೋಗುವ ಮೊದಲು ಗಾಂಧಿ ಜಿನ್ನಾ ಭೆಟ್ಟಿ ಮಾಡಿಸಬೇಕೆಂದು ಕ್ರಿಪ್ಸರು ಪ್ರಯತ್ನಿಸುತಿರುವರೆಂದು ಸುದ್ದಿ ಹಬ್ಬಿತ್ತು ಇದೇ ಉದ್ದೇಶದಿಂದ ಕ್ರಿಪ್ಸರು ೧೭ ನೇ ತಾರೀಕು ರಾತ್ರಿ ಜಿನ್ನಾರನ್ನು ಭೆಟ್ಟಿಯಾದರು. ಗಾಂಧಿಜಿಯವರ ಭೆಟ್ಟಿಯ ನಂತರ ಕ್ರಿಪ್ಸರು ಪಸನ್ನಮುಖಿಗಳಾಗಿದ್ದಲ್ಲದೆ 'ನಮ್ಮ ಮಾರ್ಗದಲ್ಲೀಗ ಯಾವ ಎಡರು ತೊಡರುಗಳೂ ಇಲ್ಲ" ಎಂದು ನುಡಿದರು. ಆಶಾದಾಯಕ ಪರಿಸ್ಥಿತಿಯಿದೆಂದೂ ಅಭಿಪ್ರಾಯಪಟ್ಟರು.

# ವಿಧಾಯಕ ಅಹಿಂಸೆ

"ಗೆಳೆಯರ ಶುಶ್ರೂಷಾ ಪಥಕ"ವು ಯುದ್ಧ ಕಾಲದ ಸಂಸ್ಥೆ, ಮೊದಲು ೧೯೧೪ ರಲ್ಲಿ ಸಂಘಟಿತವಾದದ್ದು. ೧೯೩೯ ರಲ್ಲಿ ಅದರ ಕಾರ್ಯಕ್ಷೇತ್ರವನ್ನು ವಿಸ್ತರಿಸಿ ಮತ್ತೆ ಅದನ್ನು ಸಂಘಟಿಸಲಾಯಿತು. ಯುದ್ಧವಿರೋಧಿ ಅಭಿಪ್ರಾಯವುಳ್ಳ ಸ್ತ್ರೀಪುರುಷರಿಗೆ ಯುದ್ಧ ಕಾಲದಲ್ಲಿ ಸೇವೆ ಮಾಡಿ ಕಷ್ಟಕ್ಕೀಡಾದ ಜನರ ಕಷ್ಟಗಳನ್ನು ನಿವಾರಿಸುವ ಸಂಧಿಯೊದಗಿಸಿಕೊಡಲು ಇದನ್ನು ಸಂಘಟಿಸಲಾಯಿತು.

ಈ ಸಂಸ್ಥೆಯಂತೆಯೇ ಅಮೇರಿಕೆಯ ಮಿತ್ರ ಸೇವಾಸಮಿತಿಯಿದೆ. ಉತ್ತರ ಅಮೇರಿಕೆಯಲ್ಲಿಯ ಗೆಳೆಯರ ಸಂಘದ ಸಭೆಗಳ ಪ್ರತಿನಿಧಿಯದು. ೧೯೧೭ರಲ್ಲಿ ಅದು ಸಂಘಟಿಸಲಾಯಿತು. ಅಧಿಕಾರವ್ಯಾಮೋಹವನ್ನು ತೊಡೆದು ಹಾಕಿ ಜನತೆಯಲ್ಲಿ ಬಂಧುಪ್ರೇಮ ಮತ್ತು ತಿಳಿವಳಿಕೆಯನ್ನು ಅಭಿವೃದ್ಧಿಪಡಿಸಲು ಪ್ರತ್ಯಕ್ಷ ಸೇವಾರೂಪ ಪರಿಹಾರ ಮತ್ತು ಪುನರ್ರಚನೆಗಾಗಿ ಅಂದಿನಿಂದ ಈ ಸಂಸ್ಥೆ ಪ್ರಯತ್ನಿಸುತಿದೆ. ಶಾಂತಿಗಾಗಿ ಅಂತರ್‌ರಾಷ್ಟ್ರೀಯ ಸ್ವಯಂಸೇವಕ ದಳವನ್ನು ಸಂಘಟಿಸಿ ವಿಧಾಯಕ ಅಹಿಂಸೆಯ ಮೂಲಕ ಅಂತರ್‌ರಾಷ್ಟ್ರೀಯ ವ್ಯಾಪಕದೃಷ್ಟಿಯಿಂದ ಕಾರ್ಯ ಮಾಡ ಲು ಪಿಯರೆ ಸೇಲರು ಪ್ರಯತ್ನಿಸಿದರು. ೧೯೩೪ರಲ್ಲಿ ಬಿಹಾರದಲ್ಲಿ ಆದ ಪ್ರಚಂಡ ಭೂಕಂಪದ ಕಾಲಕ್ಕೆ ಅವರು ಈ ಧ್ಯೇಯಕ್ಕನುಸಾರವಾಗಿ ಕಾರ್ಯ ಮಾಡಿದ್ದು ಸರ್ವಶ್ರುತ. ಅವರನ್ನನುಸರಿಸಿ ಗೆಳೆಯರ ಶುಶ್ರೂಷಾ ಪಥಕದ ಸದಸ್ಯರು ೧೯೪೨ರ ... ನದಲ್ಲಿ ಇಂಗ್ಲಂಡದಿಂದ ಹಿಂದುಸ್ತಾನಕ್ಕೆ ಬಂದರು. ೧೯೪೨ರ ಮಿದ್ನಾಪುರ ಬಿರುಗಾಳಿಯ ಕಾಲಕ್ಕೆ ಮತ್ತು ೧೯೪೩ ರ ಬಂಗಾಲ ಬರಗಾಲ ಕಾಲಕ್ಕೆ ಜನತೆಯ ಕಷ್ಟನಷ್ಟಗಳನ್ನು ಪರಿಹರಿಸಲು ತೊಡಗಿದರು. ೧೯೪೪ ರ ಮೇದಲ್ಲಿ ಅಮೇರಿಕೆಯ ಮಿತ್ರಸೇವಾಸಮಿತಿಯವರು ಅವರ ಸಹಾಯಕರಾದರು. ಅಂದಿನಿಂದ ಈ ಎರಡೂ ಸಂಸ್ಥೆಗಳು ಒಂದೇ ಸಂಸ್ಥೆಯಂತೆ ಕಾರ್ಯಮಾಡಹತ್ತಿವೆ. ಮಕ್ಕಳಿಗಾಗಿ ಆಹಾರಾಲಯ ಮತ್ತು ಅನಾಥಾಲಯಗಳನ್ನು ಏರ್ಪಡಿಸುವದು. ಹಾಲಿನ ಪೂರೈಕೆಯ ವ್ಯವಸ್ಥೆಯನ್ನು ಸಂಘಟಿಸಿ ಮೇಲ್ವಿಚಾರಣೆ ಮಾಡುವದು, ವೈದ್ಯಕೀಯ ಸಹಾಯ ಸಲ್ಲಿಸುವದು, ಅನಾಥರಿಗೆ ಉದ್ಯೋಗ ಕಲ್ಪಿಸಿಕೊಡುವದು, ಮೀನುಗಾರರ, ನೇಕಾರರ ಮತ್ತು ಒಕ್ಕಲಿಗರ ಸಹಕಾರಿ ಸಂಘಗಳನ್ನು ಸ್ಥಾಪಿಸುವದು ಮೊದಲಾದ ಕಾರ್ಯಗಳೆ ಅವರ ಚಟುವಟಿಕೆಗಳಾಗಿವೆ. ಹಿಂದೀ ಸಂಸ್ಥೆಗಳ ಮುಖಾಂತರವಾ... ಶಕ್ಯವಿದ್ದಷ್ಟು ಕಾರ್ಯಮಾಡಬೇಕೆಂಬುದು ಅವರ ಸಾಮಾನ್ಯ ಯೋಜನೆ, ಅದನ್ನು ಮುಂದರಿಸುವದು ಅವಶ್ಯಕವೆಂದೆನಿಸಿದಾಗ ಯಾವದೆ ಯೋಜನೆಯಲ್ಲಿ ತಮಗೆ ಯಶಸ್ಸು ಸಿಕ್ಕಂತೆ ಎಂಬ ನಂಬಿಗೆ ಅವರದಾಗಿತ್ತು.

ಹಿಂದುಸ್ತಾನದಲ್ಲೆಲ್ಲ ಅತ್ಯಂತ ವ್ಯಾಪಕ ಬರಗಾಲದ ಭೀತಿಯುಂಟಾದ್ದರಿಂದ ಮಿತ್ರ ಶುಶ್ರೂಷಾ ಪಥಕದವರು ತಮ್ಮ ಕಾರ್ಯವನ್ನು ಮತ್ತೆ ಸಂಘಟಿಸಲು ಪ್ರಾರಂಭಿಸಿದ್ದಾರೆ. ಹೊರಗಿನವರಾದ ತಾವು ಜನತೆ ಮತ್ತು ಸರಕಾರದಲ್ಲಿ ಒಂದು ಬಗೆಯ ಸಂಬಂಧವನ್ನುಂಟು ಮಾಡುವದರಲ್ಲಿ ಒಳ್ಳೆ ಉಪಯುಕ್ತ ಕಾರ್ಯ ಮಾತಬಲ್ಲೆವೆಂಬ ನಂಬಿಕೆ ತಮಗಿದೆಂದು ಹೊರೇಸ ಅಲೆಕ್ಸಾಂಡರರು ನಾಲ್ಕು ವರ್ಷಗಳ ನಂತರ ಮತ್ತೆ ಗಾಂಧೀಜಿಯವರೊಡನೆ ಪರಿಚಯ ಬೆಳಸಿಕೊಳ್ಳಲು ಪುಣೆಗೆ ಬಂದಾಗ ಅಭಿಪ್ರಾಯ ಪಟ್ಟರು. "ನಮ್ಮ ಬಗ್ಗೆ ಸರಕಾರದವರು ಸಂಶಯ ಪಡುವದಿಲ್ಲ ...ವರ ಉದ್ದೇಶ ಮುಂತಾದವುಗಳ ಬಗ್ಗೆ ನಾವೂ ಸಂಶಯ ತೆಗೆದುಕೊಳ್ಳುವದಿಲ್ಲೆಂಬುದು ಅವರ ಮನವರಿಕೆಯಾಗಿದೆ. ಇದಕ್ಕೂ ಹೆಚ್ಚೆಂದರೆ ಸರಕಾರದ ಮೇಲೆ ತೆಗೆದುಕೊಳ್ಳುವಂತೆ ಜನ ನಮ್ಮ ಮೇಲೆ ಸಂಶಯ ತೆಗೆದುಕೊಳ್ಳುವದಿಲ್ಲ. ನಾವು ಮುಂದಡಿಯಿಡಬಹುದೆಂದು ನಿಮಗನಿಸಿದರೆ ನಮ್ಮನ್ನು ಪ್ರೋತ್ಸಾಹಿಸಿ ನಮಗೆ ಸಹಾಯಕವಾಗುವಂತೆ ಕೆಲ ಮಾತುಗಳನ್ನು ಹೇಳಿರಿ ಮತ್ತು ಸಾಕಷ್ಟು ಆಹಾರ ಪದಾರ್ಥಗಳನ್ನು ಪಡೆಯುವ ಕಾರ್ಯದಲ್ಲಿ ಅಮೇರಿಕೆಯಲ್ಲಿನ ನಮ್ಮ ಏಜಂಟರಿಗೆ ಸಹಾಯಕರಾಗಿರಿ" ಎಂದೂ ಅಲೆಕ್ಸಾಂಡರರು ನುಡಿದರು. ಚೀನದಲ್ಲಿ ಇಂಡಸ್ಕೋದ ಸಂಬಂಧದಲ್ಲಿ ನ್ಯೂಜಿಲಂಡದ ಅಲ್ಲೆ ಮತ್ತು ಅವರ ಸಹಕಾರಿ ಜಾರ್ಜ ಹಾಗ್‌ರವರು ಅನುಸರಿಸಿದ ಮಾರ್ಗವನ್ನು ಸ್ವೀಕರಿಸಿರೆಂದು ಗಾಂಧೀಜಿಯವರು ಅವರಿಗೆ ಹೇಳಿದರು. ಅವರು ಪರದೇಶಸ್ಥರಾಗಿದ್ದರೂ ಚೀನದ ಉದಾಹರಣೆಯಿಂದ ಸ್ಫೂರ್ತಿ ಪಡೆದು ಆತ್ಮವಿಶ್ವಾಸವನ್ನು ತಾಳಿದರು. ಬರಗಾಲ ಪ್ರತಿಬಂಧಿಸಲು ಈ ಸಂಸ್ಥೆಯವರ ಕಾರ್ಯ ಯೋಜನೆಯನ್ನು ಗಾಂಧೀಜಿ ಸಾಮಾನ್ಯವಾಗಿ ಒಪ್ಪಿಸಿದರು. ಆದರೆ 'ಹೊರಗಿನಿಂದ ಆಹಾರವನ್ನು ಬಿಕ್ಕೆ ಬೇಡುವದು' ಅವರಿಗೆ ಒಪ್ಪಿಗೆಯಾಗಲಿಲ್ಲ. "ಆಹಾರ ಪದಾರ್ಥ ಬಂದರೆ ಅದಕ್ಕೆ ಸುಸ್ವಾಗತ. ಆದರೆ ಅದನ್ನು ನಾವು ಅವಲಂಬಿಸತಕ್ಕದ್ದಲ್ಲ. ಹಿಂದುಸ್ತಾನವು ಪೂರ್ವದೇಶಗಳ ಕಣಜವಿದ್ದಂತೆ ಹೀಗಿದ್ದರೂ ಅಮೇರಿಕೆ ಮತ್ತು ಉಳಿದ ದೇಶಗಳಿಗೆ ಆಹಾರಕ್ಕಾಗಿ ಕೇಳಿಕೊಳ್ಳಬೇಕಾದ ಪ್ರಸಂಗ ಬಂದಿದೆ. ನನಗೆ ಇದು ಸೇರುವದಿಲ್ಲ.

ಏನೇ ಆದರೂ ಸ್ವಾವಲಂಬಿಗಳು ನಾವಾದರೆ ಶಕ್ತಿ ನಮ್ಮಲ್ಲಿ ಬಂದೇತೀರುವದು. ಆದರೆ ಎಲ್ಲಿಂದ ಎಂಬುದು ನಮಗೆ ಗೊತ್ತಾಗದು. ಬಹುಶಃ ಅದು ಮೂಲನಿಧಿಯಿಂದಲೇ ಬರುವದು. ಹುತ್ತು ಸಾಯಲಾರೆವೆಂದು ಜನತೆಗೆ ನಿಸುತ್ತದೆ. ಅಲ್ಲದೆ ಬಂದರಗಳಲ್ಲಿ ಆಹಾರ ಪದಾರ್ಥಗಳು ಬಂದ ಕೂಡಲೆ ಸಮಸ್ಯೆ ಪರಿಹಾರವಾಗದು. ಕೊರತೆ ಪ್ರದೇಶಗಳಿಗೆಲ್ಲ ಅದನ್ನು ಮುಟ್ಟಿಸುವದವಶ್ಯವಾಗಿದೆ. ಹಂಚಿಕೆಯೇ ನಿಜವಾದ ಸಮಸ್ಯೆ. ಅದನ್ನು ಯೋಗ್ಯ ರೀತಿಯಿಂದ ಬಿಡಿಸದಿದ್ದರೆ ಬಂದರಗಳಲ್ಲಿಯೇ ಆಹಾರ ಪದಾರ್ಥಗಳು ಕೊಳೆಯಬಹುದು. ಇತ್ತ ಗ್ರಾಮಾಂತರಗಳಲ್ಲಿ ಜನ ಸಾಯಬಹುದು. ಸದ್ಯದ ಲಂಚಗುಳಿತನದ ವಾತಾವರಣದಲ್ಲಿ ಅದು ನಿರಾಶಾಜನಕವೇ ಆಗಿದೆ. ಆಹಾರ ಪದಾರ್ಥಗಳು ಹಡಗಗಳಲ್ಲಿ ಬಂದರಗಳಲ್ಲಿ ಬಂದ ನಂತರ ಅವು ಆಯಾ ಅವಶ್ಯಕ ಪ್ರದೇಶಗಳಿಗೆ ಹೋಗಬೇಕಾದರೆ ಎರಡು ತಿಂಗಳಾದರೂ ಬೇಕೆಂಬದಾಗಿ ಮೊನ್ನೆ ಮೊನ್ನೆ ಒಬ್ಬ ಅಧಿಕಾರಿಗಳು ಒಂದು ಲಿಖಿತವನ್ನು ಕಳಿಸಿದ್ದರು. ಆ ಅವಧಿಯಲ್ಲಿ ಜನತೆ ಮಾಡತಕ್ಕದ್ದೇನು? ಅವರು ಸ್ವಪ್ರಯತ್ನದಿಂದಲೇ ನೀರಿನ ಉಪಯೋಗ ಮಾಡಿ ಶಕ್ಯವಿದ್ದುದನ್ನು ಬೆಳೆಯಬೇಕು. ಕೋಟ್ಯಾವಧಿ ಜನ ಇದಕ್ಕಣಿಯಾದರೆ ಹೊರಗಿನಿಂದ ಆಹಾರ ಪದಾರ್ಥಗಳು ಬರುವ ಮೊದಲೇ ಅವರು ಆತ್ಮರಕ್ಷಣೆಯ ಕಾರ್ಯದಲ್ಲಿ ಬಹಳ ಕೆಲಸ ಮಾಡಿದಂತಾಗುವದು.

ಬಂಗಾಲ ಹಳ್ಳಿಗರ ಉದ್ಧಾರಕ್ಕಾಗಿ ಈ ಸಂಸ್ಥೆಯವರು ಕಾಯಂ ಸ್ವರೂಪದ ಕಾರ್ಯವನ್ನು ಮಾಡಹತ್ತಿರುವರೆಂದು ಹೊರೇಸರು ಗಾಂಧಿಜಿಗೆ ಹೇಳಿದರು. ಒಂದೇ ಕಾಲಕ್ಕೆ ನಾಲ್ಕೈದು ವಿಧವಾಗಿ ಅವರು ಜನತೆಯ ಬಡತನವನ್ನು ಹಿಂಗಿಸಲು ಪ್ರಯತ್ನ ಪ್ರಾರಂಭಿಸಿರುವರು. ಪಂಡಿತ ಜವಾಹರಲಾಲರೊಡನೆ ಅವರು ಈ ಪ್ರಶ್ನೆಯ ವಿಚಾರ ಮಾಡಿರುವರು. ಎರಡು ಕಾರಣಗಳಿಗಾಗಿ ಅವರು ಇದಕ್ಕೆ ಮನ್ನಣೆಯಿತ್ತಿರುವರು. "ಸ್ವಾತಂತ್ರ್ಯ ಸಿಕ್ಕ ಬಳಿಕ ಯುದ್ಧೋತ್ತರ ಪುನರ್ವ್ಯವಸ್ಥೆಯ ಕಾರ್ಯದಲ್ಲಿ ನಾವು ಸಹಾಯ ಮಾಡಬಹುದು. ಅದರಿಂದ ರಾಷ್ಟ್ರೀಯ ಸರಕಾರದವರು ಅತಿ ಮಹತ್ವದ ಕಾರ್ಯಗಳನ್ನು ಮಾಡಬಲ್ಲರೆಂದು ಜನತೆ ತಾಳಿದ ನಂಬಿಕೆ ಸುಳ್ಳಾಗದಂತೆ ನೋಡಿಕೊಂಡಂತಾಗುವದು, ಅಲ್ಲದೆ ಪಾಶ್ಚಿಮಾತ್ಯರು ಕೆಲವರು ಇಲ್ಲಿಗೆ ಬಂದು ಇಲ್ಲಿನ ಜನರ ಸೇವೆಗಾಗಿ ಸನ್ನದ್ಧರಾಗುವದರಿಂದ ಜಾತೀಯತೆಗೆ ಅದೊಂದು ರಾಮಬಾಣ ಉಪಾಯವಾಗಿ ಪರಿಣಮಿಸುವದು ಇಲ್ಲದಿದ್ದರೆ ಸ್ವಾತಂತ್ರ್ಯ ಸಿಕ್ಕ ಕೂಡಲೆ ಜಾತೀಯತೆ ಹಿಂದುಸ್ತಾನದಲ್ಲೆಲ್ಲ ತಾಂಡವನೃತ್ಯ ಮಾಡಬಹುದು." ಪಂಡಿತ ನೆಹರುರವರು ಅಭಿಪ್ರಾಯಕ್ಕೆ ಗಾಂಧೀಜಿ ಸಂಪೂರ್ಣ ಒಪ್ಪಿಗೆ ಕೊಟ್ಟರು. "ಇಂಥ ಕಾರ್ಯ ಯಾರೇ ಮಾಡಲಿ ಅದು ಅವರ ತೂಕದಷ್ಟು ಬಂಗಾರದ ಬೆಲೆಯದಾಗುವದು" ಎಂದು ಅವರು ಹೇಳಿದರು. ನೆಹರೂರವರು ತಳೆದ ಅಂಜಿಕೆಯೂ ಯೋಗ್ಯವಾಗಿದೆಂದು ಅವರು ಅಭಿಪ್ರಾಯಪಟ್ಟರು. "ಪಂಡಿತ ನೆಹರುರವರು ಗಂಡಾಂತರದ ಸೂಚನೆ ಕೊಟ್ಟು ಒಳಿತನ್ನೆ ಮಾಡಿದರು." ಎಂದು ಗಾಂಧಿಜಿಯವರು ಜೋಡಿಸಿದರು. ಈಗ ಗಂಡಾಂತರ ಇನ್ನೂ ಆಳವಾಗಿದೆಂದು ಅವರು ನುಡಿದರು. ಆ ಚಿತ್ರ ಬಹಳ ಭಯಾನಕವಾಗಿದೆ. ಯುರೋಪಿಯನ್‌ರ ಬಗ್ಗೆ ಪೂರ್ವದೇಶಗಳಲ್ಲೆಲ್ಲ ಭಾವನೆಗಳು ಬೆಳೆಯುತ್ತಿವೆ. ಜನಸಾಮಾನ್ಯರ ಮನಸ್ಸಿನಲ್ಲಿ ಎಷ್ಟೆಷ್ಟೋ ವಿರೋಧಕ ಶಕ್ತಿಗಳು ಸುಳಿದಾಡುತಿವೆ. ಆ ಬಿರುಗಾಳಿ ಎದ್ದರೆ ಈ ಸಂಸ್ಥೆಯವರೆ ಅದರ ಹೊಣೆಯನ್ನೆಲ್ಲ ಹೊರಲು ಸಿದ್ಧರಾಗಬೇಕು. ಆ ಸ್ವಾರ್ಥತ್ಯಾಗಕ್ಕೆ ಅವರು ಸಿದ್ಧರಾಗಲಿಕ್ಕೆ ಬೇಕು. ಆ ಕಾರ್ಯಕ್ಕೆ ಅವರು ಸಿದ್ಧರಾಗುವಾಗಲೆ ಕೊನೆಯಲ್ಲಿ ಎಲ್ಲವೂ ಒಳ್ಳಿತಾಗುವದೆಂದು ತಮ್ಮಂತೆ ಆಸೆ ತಾಳಲು ಅವರು ಬಯಸಿದರು. "ಗಂಡಾಂತರ ಎದುರಿಗೆ ಕಾಣತಿದ್ದರೂ ಸ್ವಲ್ಪವೂ ಎದೆಗುಂದದೆ ದೇವರ ಮೇಲೆ ಭಾರ ಹಾಕಿ ಧೈರ್ಯದಿಂದ ಎದುರಿಸುವದರಲ್ಲಿಯೆ ನಿಜವಾದ ಜಾಣತನವಿದೆ' ಎಂದು ಅವರು ಮಾತು ಮುಗಿಸಿದರು.

ಉರುಳಿ
ಶನಿವಾರ
೨೩-೩-೪೬

ಪ್ಯಾರೇಲಾಲ

---

## ಇಂಗ್ಲಿಶ್ ಮನುಷ್ಯನ ಅಡಚಣಿ

'ನಾವೆಷ್ಟೇ ಮಿತ್ರತ್ವದಿಂದ ಇರಬಯಸಿದರೂ ಹಳೆಯ ರೂಢಿ ಸಂಪ್ರದಾಯಗಳು ನಿಮ್ಮ ಕುತ್ತಿಗೆಗೆ ಉರಲು ಬಿದ್ದು ನಿಮ್ಮನ್ನು ಕಷ್ಟಕ್ಕೆ ಗುರಿಮಾಡುತಿವೆ" ಎಂದು ಗಾಂಧೀಜಿಯವರನ್ನು ಕಲಕತ್ತೆಯಲ್ಲಿ ಭೆಟ್ಟಿಯಾದ ಈ ಮಿತ್ರ ಶುಶ್ರೂಷಾಪಥಕದ ಮತ್ತೊಬ್ಬ ಸದಸ್ಯ ನುಡಿದ "ಇಂಗ್ಲೀಷ ಮನುಷ್ಯನ ಸದ್ಭಾವನೆಗಳನ್ನು ಬಂಗಾಲಿ ತರುಣ ವಿದ್ಯಾರ್ಥಿಗಳಿಗೆ ತಿಳಿಸಿ ಕೊಡಬಲ್ಲೆನೆಂಬ ಆಶೆ ತಾಳುವುದು ಕಠಿಣವೆ ಸೈ ಕವಾಚಿತ್ ಅವನು ಇಂಗ್ಲಂಡಿಗೆ ವರ್ಗವಾಗಿ ಹೋದರೆ ಅದು ಶಕ್ಯವಾಗಬಹುದು" ಹಿಂದುಸ್ತಾನದ ವಾತಾವರಣ ವಿಷಮವಾಗಿದ್ದು ಸದ್ಯಕ್ಕೆ ಇಂಗ್ಲಿಶ್ ಮನುಷ್ಯನು ಹಿಂದುಸ್ತಾನದಲ್ಲಿ ಕೆಲಸಕ್ಕೆ ಬರುವದಕ್ಕಿಂತ ಕೆಲ ಸಮಯ ದಾರಿ ನೋಡುವದು ಒಳಿತಾಗಬಹುದೊ ಎಂದವರು ಆಶ್ಚರ್ಯ ವ್ಯಕ್ತಪಡಿಸುತ್ತ ನುಡಿದರು.

'ಯಾವನೇ ಗೆಳೆಯ, ನಿಜವಾದ ಗೆಳೆಯ ಶ್ರೇಷ್ಠನೆಂದಲ್ಲ. ಆದರೆ ಕೇವಲ ಸೇವಾಭಾವನೆಯಿಂದ ಇಲ್ಲಿಗೆ ಬಂದರೆ ಅವನಿಗೆ ಯಾವಾಗಲೂ ಸ್ವಾಗತ ಸಿಕ್ಕಲಿಕ್ಕೆಬೇಕು' ಎಂದು ಗಾಂಧಿಜಿ ಉತ್ತರಿಸಿದರು ಹಿಂದುಸ್ತಾನ ಸ್ವತಂತ್ರವಾದಾಗ ಇಂಥ ಸಹಾಯ ನೆಲ್ಲ ಅದಕ್ಕೆ ಅವಶ್ಯ. ನೀವನ್ನುವಂತೆ ಇಂಗ್ಲಿಶ್ ಮನುಷ್ಯನ ಬಗ್ಗೆ ಅವಿಶ್ವಾಸ ಇದ್ದೇ ಇದೆ ಹಿಂದೀ ವಿದ್ಯಾರ್ಥಿಗಳನ್ನು ಇಂಗ್ಲಂಡಿಗೆ ಕಳಿಸಿದರೂ ಅದು ಮಾಯವಾಗಲಾರದು ನೀವದನ್ನು ತಿಳಿದುಕೊಂಡು ಬಾಳಬೇಕು. ಇತಿಹಾಸದಲ್ಲಿ ಅದರ ಬೇರುಗಳು ಆಳವಾಗಿ ಬಿಟ್ಟಿವೆ. ದಿವಂಗತ ಚಾರ್ಲಿಅಂಡ್ರ್ಯೂಜ ಮತ್ತು ನಾನು ಜೀವದ ಗೆಳೆಯರು ನಾವಿಬ್ಬರೂ ಕೂಡಿಯೆ ವಿಚಾರ ಮಾಡದಂಥ ಒಂದೂ ವಿಷಯವಿರಲಿಲ್ಲ. ಹಿಂದೀ ಉಡುಪನ್ನೂ ಅವರು ಧರಿಸುತಿದ್ದರು. ಹಲವು ಸಲ ವಿಚಿತ್ರ ಪರಿಣಾಮಗಳೂ ಉಂಟಾಗುತಿದ್ದವು. ಆದರೆ ಅವರು ಸಂಶಯಾತೀತರಾಗಿರಲಿಲ್ಲ. 'ಗುಪ್ತಚಾರ'ರೆಂದೂ ಅವರನ್ನು ಆರೋಪಿಸಲಾಗುತಿತ್ತು. ಅವರೊಳ್ಳೆ ಭಾವನಾತ್ಮಕಜೀವಿಗಳು ಅವರ ಮೇಲೆ ಮಾಡಲ್ಪಡುವ ಟೀಕೆಯಿಂದ ಅವರು ಬಹಳ ನೊಂದುಕೊಳ್ಳುತಿದ್ದರು. ನಿರಾಧಾರ ಅಪನಂಬಿಕೆಯನ್ನು ಹೋಗಲಾಡಿಸಲು ನಾನು ಬಹಳ ಪ್ರಯತ್ನಪಡಬೇಕಾಗುತ್ತಿತ್ತು. 'ಅವರು ಗೂಢಚಾರರಿದ್ದರೆ ನಾನೂ ಗುಪ್ತಚಾರ' ಎಂದು ನಾನೇ ಟೀಕಾಕಾರರಿಗೆ ಹೇಳಿದೆನು. ಕೊನೆಗೆ ಸಿ ಎಫ್ ಅಂಡ್ರ್ಯೂಜರು ವಿಜಯಿಯಾದರು.

"ಪಿಯರಸನ್‌ರು ಸಿ ಎಫ್ ಅಂಡ್ರ್ಯೂಜರ ಶಿಷ್ಯ ಮತ್ತು ಮಿತ್ರ. ಅವರೂ ಅವಿಶ್ವಾಸಕ್ಕೆ ಪಾತ್ರರಾಗಬೇಕಾಯಿತು. ಅನಂತರ ಸ್ಟೋಕ್ಸರ ಸರತಿ ಬಂತು. 'ಹಿಂದುಸ್ತಾನದ ಸೇವೆ ನನಗೆ ಮಾಡಬೇಕಿದ್ದರೆ ನಾನು ಹಿಂದೀಯನೆ ಆಗಬೇಕು" ಎಂದು ಅವರು ನೆನೆದು ಕ್ರಿಶ್ಚನ್ ರಜಪೂತ ಕನ್ಯೆಯನ್ನು ಲಗ್ನವಾದರು. ರಜಪೂತರು ಅವರನ್ನು ಬಹಿಷ್ಕರಿಸಿದರು. ಪ್ರಾರಂಭದಲ್ಲಿ ಸರಕಾರದವರು ಅವರನ್ನು ನಂಬಲಿಲ್ಲ. ಸರಕಾರ ಮತ್ತು ಭಾರತೀಯರಿಬ್ಬರ ಅಪನಂಬಿಕೆಯನ್ನು ಅವರು ಹೋಗಲಾಡಿಸಿರುವರು.

"ಹೀಗಿದ್ದರೂ ಸಿ ಎಫ್ ಅಂಡ್ರ್ಯೂಜ, ಸ್ಟೋಕ್ಸ ಮತ್ತು ಉಳಿದವರು ಅವಿಶ್ವಾಸಕ್ಕೊಳಗಾಗಿ ಬಾಳಬೇಕಾದ ಪ್ರಸಂಗವಿದ್ದಾಗ ನಿಮ್ಮ ಬಗ್ಗೆ ಅಪನಂಬಿಕೆಯುಂಟಾದುದಕ್ಕಾಗಿ ಆಶ್ಚರ್ಯಪಡುವ ಕಾರಣವಿಲ್ಲ" ಎಂದರು. ಗಾಂಧೀಜಿ

"ಇಂಗ್ಲಿಶ ಮನುಷ್ಯನೆಂದರೆ ಆಳುವ ಜನಾಂಗದ ಸದಸ್ಯರೆಂದು ಭಾರತೀಯರು ಈ ವರೆಗೆ ಭಾವಿಸುತ್ತ ಬಂದಿರುವರು. ಇಂಥ ಇಂಗ್ಲಿಶ್‌ಮನುಷ್ಯನಲ್ಲಿ ಮತ್ತು ಒಳ್ಳೆ ವಿನಯಿ ಸಭ್ಯ ಯುರೋಪಿಯನ್‌ರಲ್ಲಿ ಸಾಮಾನ್ಯ ದಾರಿಹೋಕನು ಯಾವದೆ ಬಗೆಯ ಅಂತರ ತಿಳಿಯನು. ಸಾಮ್ರಾಜ್ಯವಾದಿ ಹಳೆಯ ಇಂಗ್ಲಿಶ್ ಮನುಷ್ಯನೆಂದು ಅವನನ್ನು ತಿಳಿದುಕೊಂಡದ್ದುಂಟು. ಈಗ ಹೊಸದಾಗಿ ಮುಂದೆಬರುತಿರುವ ಇಂಗ್ಲಿಶ್‌ರು ತಮ್ಮ ಹಿರಿಯರು ಮಾಡಿದ ಪಾಪಗಳಿಗಾಗಿ ಈಗ ಪ್ರಾಯಶ್ಚಿತ್ತವನ್ನು ಅನುಭೋಗಿಸಬೇಕಾಗಿದೆ. ಆದುದರಿಂದ ಸ್ವಾರ್ಥತ್ಯಾಗದ ಕಿಚ್ಚು ಯಾರಲ್ಲಿ ಇಲ್ಲವೊ ಅಂಥವರ ಬಗ್ಗೆ ನಾನು ಹೀಗೆ ಹೇಳಬಯಸುತ್ತೇನೆ. 'ಈಗಲೆ ಹಿಂದುಸ್ತಾನಕ್ಕೆ ಬರಬೇಡಿರಿ' ಆದರೆ ನೀವು ವೀರರ ಪಡಿಯಚ್ಚಿನಲ್ಲಿ ತಯಾರಾಗಿದ್ದರೆ ಕಠಿಣ ಹೋಗದು. ನೀವು ಪರಿಶ್ರಮಪಡುತ್ತ ನಡೆದರೆ ಕೊನೆಗೆ ನಿಮಗೆ ತಕ್ಕ ಬೆಲೆ ಸಿಕ್ಕುವದು ಅದೇನೇ ಇದ್ದರೂ ಈ ವರೆಗೆ ಇಲ್ಲಿದ್ದವರು ಮಾತ್ರ ಮರಳಿ ಹಿಂದಕ್ಕೆ ಹೋಗುವ ಕಾರಣವಿಲ್ಲ." ಎಂದೂ ಗಾಂಧೀಜಿ ಹೇಳಿದರು.

ಚೀನೀ ಸಹಕಾರಿ ಸಂಘಗಳ ಇಂಡಸ್ಕೋ ಯೋಜನೆಯಲ್ಲಿಯ ದೋಷಗಳೇನು ಎಂಬ ಬಗೆಯೂ ಆ ಗೆಳೆಯ ಗಾಂಧೀಜಿಯವರಿಂದ ವಿವರಣೆ ಪಡೆದುಕೊಂಡನು. ಮೊದಲನೆಯದಾಗಿ ಇಂಡಸ್ಕೋ ಇದು ಅಸಾಮಾನ್ಯ ಕಾಲದಲ್ಲಿ ಸಂಘಟಿತವಾದುದು. ಜಪಾನದವರ ದಿಗ್ಬಂಧನದಿಂದ ಪ್ರೇರಿತವಾಗಿ ಯುದ್ಧೋದ್ದೇಶಗಳನ್ನು ಸಫಲಗೊಳಿಸಲು ಯುದ್ಧಕಾಲದಲ್ಲಿಯೆ ಸಂಸ್ಥಾಪಿತವಾದ ಸಂಸ್ಥೆ ಇದು. ಎರಡನೆಯದಾಗಿ ಪರಕೀಯ ಮಿಶನರಿಗಳು ಅದನ್ನು ಸಂಘಟಿಸಿದ್ದರು. ಧರ್ಮಾಂತರದ ಉದ್ದೇಶವನ್ನಿಟ್ಟುಕೊಂಡಿದ್ದರಿಂದ ಅದು ಸದೋಷವಾಗಿದ್ದಿತು. 'ಹಿಂದುಸ್ತಾನದಲ್ಲಿ ಚೀನಿ ಸಹಕಾರ ಸಂಘಗಳ ಮಾದರಿಯನ್ನು ಹಿಂದುಸ್ತಾನದಲ್ಲಿ ಅನುಕರಿಸಲು ಪ್ರಯತ್ನಿಸಿದ್ದಾದರೆ ನೀವು ಸಂಪೂರ್ಣ ಅಯಶಸ್ವಿಗಳಾಗುವಿರಿ. ಇಲ್ಲಿ ನೀವು ಹಿಂದೀ ಕ್ರಿಶ್ಚನ್‌ರಗೂಡ ಕೆಲಸ ಮಾಡಬೇಕಾಗುವುದು. ಸ್ವಭಾವ, ಶೀಲ ಭಿನ್ನವಾಗಿವೆ; ಪರಿಸ್ಥಿತಿಗಳೂ ಭಿನ್ನವಿರುವವು. ಭೂಮಿಯಲ್ಲಿ ಆಳವಾಗಿ ಬೇರೂರಿದ್ದ ಸಹಕಾರವೆ ಕಾರ್ಯಕಾರಿಯಾಗುವದು. ಆದುದರಿಂದ ಹಿಂದುಸ್ತಾನದ ಪ್ರಕೃತಿ ಮತ್ತು ಭೂಮಿಗೆ ಯಾವುದು ಅತ್ಯಂತ ಅನುರೂಪವಾಗಿರುವದೋ ಅಂಥ ಸಹಕಾರವನ್ನು ನಾವು ಸಂಶೋಧಿಸಬೇಕು. ಸನಾತನ ಕ್ರಿಸ್ತಿಗಳು ಕೂಡ ಈಗ ಮತಾಂತರ ಹೊಂದುತಿರ್ಪರು.

'ಮತಾಂತರ ಹೊಂದುವದು' ಎಂದರೆ ಹಿಂದೆ ಹೋಗುತಿರುವರೆಂದು ಅರ್ಥವೋ ?

"ಅಹುದು. ನಿಜವಾದ ಕ್ರಿಶ್ಚನ್ ಧರ್ಮಕ್ಕೆ, ಕ್ರಿಸ್ತನಲ್ಲ, ಪಾಶ್ಚಾತ್ಯ ಕ್ರಿಶ್ಚನ್ ಧರ್ಮಕ್ಕಲ್ಲ. ಜೀಸಸ್‌ನು ಏಶಿಯಾದವನಿದ್ದಾನೆಂಬುದು ಅವರಿಗೆ ತಿಳಿಯಹತ್ತಿದೆ. ಇದನ್ನರಿತುಕೊಂಡು ಅವರು ಹಿಂದೀಯರ ದೃಷ್ಟಿಯಿಂದ ಬಾಯಿಬಲ್ ಓದಹತ್ತಿರುವರು. ಜೆ. ಸಿ. ಕುಮಾರಪ್ಪನವರ 'ಜೀಸಸ್‌ನ ನಡೆನುಡಿಗಳು' ಎಂಬ ಪುಸ್ತಕದಿಂದ ನೀವು ಹಿಂದೀ ಕ್ರಿಶ್ಚನ್ ಧರ್ಮದ ಅಭ್ಯಾಸ ಮಾಡಿರಿ.

ಉರುಳಿ
ಶನಿವಾರ
೨೩-೩-೪೬

ಪ್ಯಾರೇಲಾಲ

---

## ಮಧ್ಯಪ್ರಾಂತ ಶಾಸನಸಭೆಯಲ್ಲಿ ಕಾಂಗ್ರೆಸ್ಸಿನ ಪ್ರಚಂಡ ಬಲ

### ೧೧೨ ರಲ್ಲಿ ೯೨ ಸ್ಥಳಗಳು

ಮಧ್ಯಪ್ರಾಂತ ಶಾಸನ ಸಭೆಯ ೧೧೨ ಸ್ಥಳಗಳಲ್ಲಿ ಕಾಂಗ್ರೆಸ್ಸಿಗೆ ಒಟ್ಟು ೯೨ ಸ್ಥಳಗಳು ಸಿಕ್ಕಿರುವವು. ಹಿಂದುಳಿದ ವರ್ಗದ ಸ್ಥಳವೂ ಕಾಂಗ್ರೆಸ್ಸಿಗೆ ಸಿಕ್ಕು ಘೂಲಭಾನಶಹಾ ಅವರು ಆರಿಸಿ ಬಂದಿರುವರು. ಘೂಲಭಾನರಿಗೆ ೪೯೦೩ ಗೊಂಡ ಮಹಾಸಭೆಯ ಮಂಗ್ರೂ ಗೊಂಡರಿಗೆ ೨೭೩೯ ಮತಗಳು ಬಿದ್ದವು.

# ದಂಗೆಗಳು ನಡೆದಲ್ಲಿ ಹೋಗಿ ಪುಂಡರಿಗೆ ಉಪದೇಶಿಸಬೇಕು

ಮಹಾತ್ಮಾ ಗಾಂಧಿಯವರು ಹೊಸದಿಲ್ಲಿ ರಾಮಲೀಲಾ ಬೈಲಿನಲ್ಲಿ ೧೪ನೇ ತಾರೀಕು ಪ್ರಾರ್ಥನೆ ಸಭೆಯಲ್ಲಿ ಭಾಷಣ ಮಾಡುತ್ತ ದಂಗೆಗಳ ವಿಷಯವೆತ್ತಿ ಅವುಗಳ ಜವಾಬದಾರಿಯು ಸಂಹರಿಸುವ ಹಾಗು ಸಂಸ್ಕೃತರಾಗುವ ಕಿಡಿಗೇಡಿಗಳ ಮೇಲಿರದೆ ಸಮಾಜದಲ್ಲಿ ಉಚ್ಚ ಸ್ಥಳ ಹೊಂದಿ ಹಿಂದೆ ನಿಂತು ಪ್ರಚೋದಿಸುತ್ತಿರುವ ಸುಶಿಕ್ಷಿತರ ಮೇಲೆ ಇರುವದೆಂದು ಹೇಳಿದರು. ಅವರ ಭಾಷಣದ ಅಧಿಕೃತ ವರದಿ ಕೆಳಗೆ ಕೊಡಲಾಗಿದೆ.

ಸಿನ್ನಿನ ಪ್ರಾರ್ಥನಾ ನಂತರ ಭಾಷಣದಲ್ಲಿ ಮಹಾತ್ಮಾ ಗಾಂಧಿಯವರು ಚಿಕ್ಕ ಮಕ್ಕಳಲ್ಲಿ ಸಹ ಶಿಸ್ತಿನ ಅವಶ್ಯಕತೆ ಇರುವದೆಂದು ಪ್ರತಿಪಾದಿಸಿದರು. ಪ್ರಾರ್ಥನೆಯ ಕಾಲದಲ್ಲಿ ಇಬ್ಬರು ಚಿಕ್ಕಮಕ್ಕಳು ಜಲುಕ್ತ ಕೂತಿದ್ದರು. ಅದನ್ನು ನೋಡಿ ಅವರು ಸಿಟ್ಟಿಗೆದ್ದರು. ಅದು ಆ ಹುಡುಗರ ಪಾಲಕರ ತಪ್ಪಿತ್ತು. ಚರ್ಚದಲ್ಲಿ ಈ ರೀತಿ ಹುಡುಗರು ಆಡುತ್ತಿರುವದು ಅವರು ಎಂದೂ ನೋಡಿಲ್ಲ. ನಿಜವಾದ ಸಂಸ್ಕೃತಿ ದೃಷ್ಟಿಯಿಂದ ನೋಡಿದರೆ ಪ್ರಾರ್ಥನೆ ಕಾಲಕ್ಕೆ ಪ್ರಾರ್ಥನಾ ಸ್ಥಳದಲ್ಲಿ ಅದು ಚರ್ಚ, ಮಸೀದಿ ಅಥವಾ ದೇವಾಲಯ ಯಾವದೇ ಇರಲಿ ಸಂಪೂರ್ಣ ಶಾಂತತೆ ಇರುವದು ಅವಶ್ಯವಿದೆ. ಅನೇಕ ದೇವಾಲಯಗಳು ಗೊಂದಲ ಸ್ಥಳಗಳಾಗಿರುವದು ಕಂಡು ಅವರು ಮರಗುವರು. ದೇವಾಲಯಕ್ಕೆ ಕಲ್ಲು ಇಲ್ಲವೆ ಲೋಹದ ಮೂರ್ತಿ ಪೂಜಿಸಲು ನಾವು ಹೋಗಿದೆ ಅದರಲ್ಲಿರುವ ದೇವರನ್ನು ಪೂಜಿಸಲು ಹೋಗುತ್ತೇವೆ. ಮೂರ್ತಿಯು ಮನುಷ್ಯನು ಆಹ್ವಾನಿಸಿದಂತೆ ಆಗುತ್ತದೆ ಚಿಕ್ಕಮಕ್ಕಳೊಳಗೊಂಡು ಹಿರಿಕಿರಿಯರೆಲ್ಲರೂ ಪೂಜೆ ಅಥವಾ ಪ್ರಾರ್ಥನೆ ಕಾಲಕ್ಕೆ ಸಂಪೂರ್ಣ ಶಾಂತತೆ ಪಾಲಿಸಬೇಕು"

ಅವರ ಈ ಉದ್ಗಾರಗಳ ಪರಿಣಾಮವಾಗಿ ಈ ಹೊತ್ತು ಪ್ರಾರ್ಥನೆ ಬೈಲಿನಲ್ಲಿ ಚಿಕ್ಕ ಮಕ್ಕಳು ಆಟದಲ್ಲಿ ತೊಡಗಿದ್ದು ಕಂಡು ಬರಲಿಲ್ಲ. ತಮ್ಮ ಉಪದೇಶ ಶೀಘ್ರ ಅರಗಿಸಿಕೊಂಡ ಬಗ್ಗೆ ಮಹಾತ್ಮರು ತಾಯಂದಿರನ್ನು ಅಭಿನಂದಿಸಿ ಚಿಕ್ಕಮಕ್ಕಳು ಪ್ರಾರ್ಥನೆಗೆ ಸ್ವಚ್ಛ ಬಟ್ಟೆ ಹಾಗು ಸ್ವಚ್ಛ ದೇಹದಿಂದ ಬರುವ ಅವಶ್ಯಕತೆ ಒತ್ತಿ ಹೇಳಿದರು. ಆ ಮೇಲೆ ಅವರು ದಿನದಿನಕ್ಕೆ ಬೆಳೆಯುತ್ತಿರುವ ವೃತ್ತಪತ್ರಗಳ ಸಂಖ್ಯೆ ಹಾಗು ಜನರು ಅವುಗಳಿಗೆ ಕೊಡುತ್ತಿರುವ ಅವಾಸ್ತವ ಮಹತ್ವದ ಕಡೆಗೆ ಸಭಿಕರ ಲಕ್ಷ ಎಳೆದು ಈ ರೀತಿ ಹೇಳಿದರು. ಪಶ್ಚಿಮದಲ್ಲಿಯಂತೆ ಪೂರ್ವದಲ್ಲಾದರೂ ವೃತ್ತಪತ್ರಗಳು ಜನರ ಬಾಯಿಬಲ, ಕುರಾಣ, ಝೆಂಡಾ ಅವೆಸ್ತಾ ಅಥವಾ ಗೀತಾ ಆಗಹತ್ತಿವೆ ಮತ್ತು ಅವುಗಳಲ್ಲಿ ಬಂದದ್ದೆಲ್ಲ ಈಶ್ವರೀಸತ್ಯ ಎಂದು ಭಾವಿಸಲ್ಪಡುತ್ತದೆ. ಉದಾಹರಣಾರ್ಥ ವೃತ್ತಪತ್ರಗಳು ದಂಗೆಯ ಭವಿಷ್ಯ ಸೂಚಿಸಿ, ದಿಲ್ಲಿಯಲ್ಲಿಯ ಎಲ್ಲ ಬಡಿಗೆ ಹಾಗು ಚಾಕುಗಳು ಮಾರಾಟವಾಗಿರುವವೆಂದು ಬರೆಯುವವು. ಈ ಸುದ್ದಿ ನೋಡಿ ಅನೇಕರು ಗಾಬರಿಗೊಳ್ಳುವರು. ಇದು ಅನಿಷ್ಟಕರವಾಗಿದೆ. ಇನ್ನೂ ಅಂದರೆ ವೃತ್ತಪತ್ರಗಳು ಅಲ್ಲಲ್ಲಿ ನಡೆದ ದಂಗೆಯ ವೃತ್ತಾಂತ ಕೊಟ್ಟು ಪೋಲೀಸರು ಅಲ್ಲಿ ಹಿಂದುಗಳ ಪಕ್ಷವಹಿಸಿದರು. ಇಲ್ಲಿ ಮುಸಲ್ಮಾನರ ಪಕ್ಷವಹಿಸಿದರು. ಎಂದು ಬರೆಯುವದುಂಟು. ಇದನ್ನು ನೋಡಿ ಸಾಮಾನ್ಯ ಮನುಷ್ಯನು ಗಡಬಡಿಸುವನು. ಎಲ್ಲರೂ ಅಂಜಿಕೆಯನ್ನು ಬಿಟ್ಟುಬಿಡಬೇಕು. ದೇವರಲ್ಲಿ ವಿಶ್ವಾಸವಿಟ್ಟು ಪ್ರಾರ್ಥನೆಯಲ್ಲಿ ಭಾಗವಹಿಸುವ ಸ್ತ್ರೀಪುರುಷರು ಯಾರಿಗೇ ಈ ರೀತಿ ಅಂಜುವದು ಒಪ್ಪಲಾರದು. ದಂಗೆಯದ್ದು ಅವರಲ್ಲಿ ಅನೇಕರು ಸತ್ತರೆ ಏನಾಯಿತು? ಪ್ರತಿಯೊಬ್ಬನು ಒಂದು ದಿನ ಸಾಯಲೇಬೇಕು. ಅದ್ದರಿಂದ ಹೋರಾಟ ನಡೆದಲ್ಲಿ ಹೋಗಿ ಕಿಡಿಗೇಡಿಗಳಿಗೆ ವಿವೇಕಿಗಳಾಗಲು ಉಪದೇಶಿಸಬೇಕು. ದಂಗೆಗಳಲ್ಲಿ ನಡೆದ ಸಂಹಾರಕ್ಕೆಲ್ಲ ಕಿಡಿಗೇಡಿಗಳೇ ಕಾರಣವೆಂದು ಹೇಳುವದುಂಟು ಆದರೆ ಅದರ ಜವಾಬದಾರಿ ಅವರ ಮೇಲಿರದೆ ಸಮಾಜದಲ್ಲಿ ಉಚ್ಚಸ್ಥಾನ ಹೊಂದಿ ಹಿಂದೆ ನಿಂತು ಅವರನ್ನು ಪ್ರಚೋದಿಸುತ್ತಿರುವ ಸುಶಿಕ್ಷಿತರ ಮೇಲಿರುವದು. ಅದ್ದರಿಂದ ಈ ಸುಶಿಕ್ಷಿತ ಸುಸಂಸ್ಕೃತ ಜನರು ಅವರನ್ನು ತಡೆಯಬೇಕು ಮತ್ತು ಅವಶ್ಯಬಿದ್ದರೆ ಈ ಕಾರ್ಯದಲ್ಲಿ ಜೀವವನ್ನೂ ಕೊಡಬೇಕು. ಸಣ್ಣ ಒಂದು ಹುಡಿಗೆಯು ಸಹ ಪುಂಡರಲ್ಲಿ ಹೋಗಿ ಅವರಿಗೆ ಪುಂಡಾಟಿಕೆ ನಿಲ್ಲಿಸಲು ಹೇಳಬಲ್ಲಳು. ಅವರು ಅವಳ ಮಾತು ಬಹುಶಃ ಕೇಳುವರು. ಅವರು ಕೇಳದೆ ಅವಳನ್ನೇ ಕೊಂದರೆ ಆದಾದರೂ ಅವಳ ಮಟ್ಟಿಗೆ ಒಳ್ಳೆಯದೇ ಆಗುವದು. ಅವಳು ಅಮರಳಾಗುವಳು.

# ದಿಲ್ಲಿಯಲ್ಲಿ ಮಹಾತ್ಮರ ಭಾಷಣ

ರಾಷ್ಟ್ರೀಯ ಸಪ್ತಾಹದ ಕೊನೆಯ ದಿವಸ ಸಂಜೆಯಲ್ಲಿ ಪ್ರಾರ್ಥನೆ ನಂತರ ಮಹಾತ್ಮಾ ಗಾಂಧಿಯವರು ಜನರನ್ನುದ್ದೇಶಿಸಿ ಭಾಷಣ ಮಾಡುತ್ತ, ಜಾಲಿಯಾನವಾಲಾಬಾಗ ದುರಂತವನ್ನು ನೆನಪಿಗೆ ತಂದುಕೊಂಡು ೬ ನೇ ಎಪ್ರಿಲ ದಿವಸ ಹಿಂದುಸ್ತಾನದಲ್ಲಿ ಸತ್ಯಾಗ್ರಹದ ಜನ್ಮವಾಯಿತೆಂದೂ ಆದರಿಂದ ಜನರಲ್ಲಿ ಅದ್ಭುತವಾದ ಜಾಗ್ರತೆಯುಂಟಾಗಿ ಪರಕೀಯ ಸರಕಾರದವರು ಬೆದರಿಕೆಯಿಂದ ಅದನ್ನು ಹತ್ತಿಕ್ಕಲು ಪ್ರಯತ್ನಿಸಿದರೆಂದೂ ಕೈಯಿಂದ ಎಣಿಸಬಹುದಾದ ಅವರಿಗೆ ೪೦ ಕೋಟಿ ಜನರ ಮೇಲೆ ತಮ್ಮ ಪ್ರಭುತ್ವ ಕಾಯ್ದುಕೊಂಡು ಹೋಗಲು ಬೇರೆ ಉಪಾಯವಿರಲಿಲ್ಲೆಂದೂ ಹೇಳಿದರು.

ಹಿಂದಿನ ದ್ವೇಷವನ್ನು ಪುನಃ ಕೆದರಿ ತೆಗೆಯಲು ನಾನು ಈ ಸಂಗತಿಗಳನ್ನು ಉಲ್ಲೇಖಿಸುತ್ತಿಲ್ಲ ಆ ಸಂಗತಿಗಳಲ್ಲಿ ಅಡಕವಾದ ಹಳೇ ಅಳಿಕೆ ಮುಗಿಯಬಂದಿದೆಂದು ನಿಮ್ಮ ಲಕ್ಷಕ್ಕೆ ತರುವದೇ ನನ್ನ ಉದ್ದೇಶವಿದೆ. ಬ್ರಿಟಿಶ ಮಂತ್ರಿತ್ರಯರ ಕಳಕಳಿ ಕುರಿತು ನನ್ನಲ್ಲಿ ಎಳ್ಳಷ್ಟು ಸಂಶಯವಿರುವದಿಲ್ಲ ಅವರು ಸಂಪೂರ್ಣವಾಗಿ ಹೊರಬಿದ್ದು ಹೋಗಲು ನಿರ್ಧರಿಸಿರುವರೆಂದೇ ನನಗೆ ಮನವರಿಕೆಯಾಗಿದೆ. ಸುವ್ಯವಸ್ಥಿತ ರೀತಿಯಿಂದ ಹೇಗೆ ಹಿಂತೆಗೆಯಬೇಕೆಂಬುದನ್ನೇ ಅವರು ಈಗ ವಿಚಾರ ನಡಿಸಿರುವರು. ಅದ್ದರಿಂದ ಹಳೇ ಗಾಯ ಕೆದರಿ ತೆಗೆಯಲು ಇದು ಸಮಯವಲ್ಲ. ತಪ್ಪು ತಿದ್ದಿಕೊಳ್ಳಲು ಪ್ರಯತ್ನ ನಡಿಸಿದವರನ್ನು ಅಭಿನಂದಿಸುವದೇ ಸಭ್ಯತನದ ಲಕ್ಷಣವಾಗಿದೆ. ಹಿಂದಿನದನ್ನು ತೆಗೆದು ಅವರ ಮುಖದ ಮೇಲೆ ಎಸೆಯಬಾರದು. ಜಾಲಿಯಾನವಾಲಾಬಾಗವನ್ನು ನಾನು ಇಲ್ಲಿ ಉಲ್ಲೇಖಿಸಿದ ರಹಸ್ಯವಾದರೂ ಹಳೇ ಕಾಲ ಮತ್ತು ಬರಲಿರುವ ಹೊಸ ಕಾಲದ ತಾರತಮ್ಯ ಪ್ರತಿಪಾದಿಸುವದಕ್ಕೇ ಇರುತ್ತದೆ.

ಜಯಪ್ರಕಾಶ ನಾರಾಯಣ ಹಾಗು ಡಾ. ರಾಮ ಮನೋಹರ ಲೋಹಿಯಾ ಇವರಿಬ್ಬರೂ ಕ್ರಾಂತಿವೀರರೂ ಸಾಹಸಿಗರೂ ವಿದ್ವಾಂಸರೂ ಆಗಿರುವದು ನಿಮಗೆ ಗೊತ್ತು. ಹಿಂದುಸ್ತಾನದಲ್ಲಿಯ ಪರಕೀಯ ಆಳಿಕೆಗೆ ಅವರು ಗಂಡಾಂತರ ಸ್ವರೂಪರಾಗಿ ಭಾವಿಸಲ್ಪಡುತ್ತಿರುವದು ಸಹಜವಿದೆ. ಗುಣಪರೀಕ್ಷೆಯನ್ನು ನಾವು ಬೇರೆ ಬೇರೆ ರೀತಿ ಮಾಡುವೆವು. ತಮ್ಮ ಮಾತೃಭೂಮಿಗಾಗಿ ಸರ್ವಸ್ವವನ್ನು ತ್ಯಾಗ ಮಾಡಿದ ದೇಶಭಕ್ತರೆಂದು ನಾವು ಅವರನ್ನು ಮನ್ನಿಸುವೆವು. ಅಹಿಂಸೆಯ ಪರೀಕ್ಷೆಯಲ್ಲಿ ಅವರು ಉತ್ತೀರ್ಣರಾಗದೆ ಹೋದರೆ ಇಂದು ಆ ಪ್ರಶ್ನೆಯಿಲ್ಲ. ಇಂದು ಹಿಂದುಸ್ತಾನದ ಸ್ವಾತಂತ್ರ್ಯವೆ ಬ್ರಿಟಿಶ ಹಾಗು ನಮ್ಮ ನಡುವೆ ಸಮಾನ ಭೂಮಿಕೆಯಾಗಿದೆ. ಅದ್ದರಿಂದ ಅವರ ಸ್ವಾತಂತ್ರ್ಯವು ಯಾವದೇ ಹಿತಸಂಬಂಧಕ್ಕೆ ಬಾಧಕವೆಂದು ಗಣಿಸಲ್ಪಡಲಾರದು. ಈ ದೃಷ್ಟಿಯಿಂದ ಪರೀಕ್ಷಿಸಿದಲ್ಲಿ ಅವರ ಹಾಗು ನಿನ್ನಿನ ದಿವಸ ಬಂಧಮುಕ್ತರಾದ ಹಿಂದಿ ರಾಜಕೀಯ ಕೈದಿಗಳ ಬಿಡುಗಡೆಯನ್ನು ಬ್ರಿಟಿಶ ಮಂತ್ರಿತ್ರಯರ ಮತ್ತು ವಾಯಿಸರಾಯರ ಪ್ರಾಮಾಣಿಕತನದ ದ್ಯೋತಕವೆಂದು ಭಾವಿಸಬೇಕು. ನಾವು ಈ ಬಗ್ಗೆ ಅವರಿಗೆ ಕೃತಜ್ಞರಾಗಿರಬೇಕು. ಮತ್ತು ಅವರಿಗೆ ಈ ತರದ ಬುದ್ಧಿ ಕೊಡತೊಡಗಿರುವ ಬಗ್ಗೆ ದೇವರನ್ನು ಹಾಡಿ ಹರಸಬೇಕು.

ಸತ್ಯಾಗ್ರಹ ವಾರವು ಯಾವಾಗಲೂ ಜಾತೀಯ ಐಕ್ಯ ಹಾಗು ಖಾದಿ ಪ್ರಸಾರಕ್ಕೆ ಮೀಸಲಾಗಿರುವದು. ಜಾತೀಯ ಐಕ್ಯವು ಕೇವಲ ಹಿಂದು ಮುಸಲ್ಮಾನರಿಗೆ ಮರ್ಯಾದಿತವಾಗಿಲ್ಲ. ಇಂಗ್ಲಿಷರನ್ನೊಳಗೊಂಡು ಎಲ್ಲರಿಗೂ ಅದು ಅನ್ವಯಿಸುವದು. ಅಹಿಂಸೆಯ ಸಂದೇಶವಾದರೂ ಇದೇ ಇರುವದು ಎಂದು ಅವರು ಹೇಳಿದರು.

# ಪ್ರಶ್ನ—ಪೆಟ್ಟಿಗೆ

ಪ್ರಶ್ನೆ:—ಕಾಂಗ್ರೆಸ್ ಬಹುಮತ ಪ್ರಾಂತಗಳಲ್ಲಿ ಮಂತ್ರಿಗಳ ಸಂಬಳವನ್ನು ಈ ಸಲ ಯಾವ ತತ್ವಕ್ಕನುಸಾರವಾಗಿ ಗೊತ್ತುಪಡಿಸಲಾಗುವದು. ಈ ಸಂಬಂಧದಲ್ಲಿ ಕರಾಚಿಯಲ್ಲಿ ಸ್ವೀಕೃತವಾದ ಗೊತ್ತುವಳಿ ಇನ್ನೂ ಕಾರ್ಯರೂಪದಲ್ಲಿದೆಯೆ? ಸದ್ಯದ ತೇಜಿ ಧಾರಣಿಗಳನ್ನನುಲಕ್ಷಿಸಿ ಈ ಪ್ರಶ್ನೆಯನ್ನು ಬಿಡಿಸುವದಿದ್ದರೆ ತಮ್ಮ ಎಲ್ಲ ನೋಕರರ ಸಂಬಳಗಳನ್ನೂ ಇಮ್ಮಡಿ ಮಾಡುವಷ್ಟು ಪ್ರಾಂತಿಕ ಮುಂಗಡ ಪತ್ರಿಕೆಗಳಲ್ಲಿ ಹಣವಿದೆಯೋ? ಇಲ್ಲದಿದ್ದರೆ ಚಪರಾಸಿಗಳುಇಲ್ಲವೆ ಶಿಕ್ಷಕರಿಗೆಕೇವಲ ತಿಂಗಳಿಗೆ ೧೫ರೂಪಾಯಿ ಮತ್ತು ೧೨ ರೂಪಾಯಿಗಳಿಂದ ಉಪಜೀವನ ಸಾಗಿಸಿರೆಂದೂ ಕಾಂಗ್ರೆಸಿಗೆ ಆ ಆಳಿಕೆಯನ್ನು ನಡೆಸಿಕೊಂಡು ಹೋಗಬೇಕಾದ್ದರಿಂದ ಹೆಚ್ಚು ಗಲಭೆಯೆಬ್ಬಿಸಬೇಡಿರೆಂದೂ ಹೇಳುತಿರುವಾಗ ಮಂತ್ರಿಗಳ ಸಂಬಳವನ್ನು ತಿಂಗಳಿಗೆ ೧೫೦೦ ರೂಪಾಯಿಗಳಿಗೇರಿಸುವದು ಸರಿಯಾಗಬಹುದೊ!

ಉತ್ತರ:— ಇದು ಉಚಿತ ಪ್ರಶ್ನವಾಗಿದೆ. ಮಂತ್ರಿಯು ೧೫೦೦ ರೂಪಾಯಿ ಸಂಬಳ ತೆಗೆದುಕೊಳ್ಳಬೇಕೇಕೆ, ಚಪರಾಸಿ ಇಲ್ಲವೆ ಶಿಕ್ಷಕನು ೧೫ ರೂಪಾಯಿ ಪಡೆಯಬೇಕೇಕೆ? ಆದರೆ ಪ್ರಶ್ನೆಯ ತ್ತಿದ ಮಾತ್ರಕ್ಕೆ ಅದನ್ನು ಬಿಡಿಸಿದಂತಾಗದು. ಇಂಥ ಭೇದಗಳು ಯುಗ ಯುಗಾಂತರಗಳಿಂದ ಇರುವವು. ಆನೆಗೆ ಚೀಲಗಟ್ಟಲೆ ಆಹಾರ ಬೇಕೇಕೆ. ಇರುವೆ ಕೆಲವೆ ಕಾಳುಗಳಿಂದ ಉಪಜೀವನ ಸಾಗಿಸುವುದೇಕೆ? ಈ ಪ್ರಶ್ನೆಯಲ್ಲಿಯೆ ಉತ್ತರ ಅಡಕವಾಗಿದೆ. ಅವಶ್ಯಕತೆಗನುಸಾರವಾಗಿಯೆ ಪರಮಾತ್ಮನು ಅವರವರಿಗೆ ಕೊಡುತ್ತಾನೆ. ಆನೆ ಇರುವೆಗಳ ಅವಶ್ಯಕತೆಗಳಲ್ಲಿಯಭೇದ ಗೊತ್ತಾದರೆ ಮಾನವ ಮಾನವರಲ್ಲಿಯ ಅವಶ್ಯಕತೆಗಳಲ್ಲಿಯ ಅಂತರದ ಬಗ್ಗೆ ಯಾರಿಗೂ ಸಂಶಯ ಬರಲಾರದು. ಸಮಾಜದಲ್ಲಿ ಅವಶ್ಯಕತೆಗಳಲ್ಲಿ ಭೇದಗಳು ಇದ್ದೆ ಇವೆಂದು ಅನುಭವದಿಂದ ಗೊತ್ತಾಗುತ್ತದೆ. ಆದರೆ ಅವುಗಳ ಬುಡದಲ್ಲಿಯ ನಿಯಮ ಮಾತ್ರ ನನಗೆ ಗೊತ್ತಿಲ್ಲ. ಶಕ್ಯವಿದ್ದಷ್ಟು ಈ ಅಂತರವನ್ನು ಕಡಮೆ ಮಾಡಲು ಇಂದು ಪ್ರಯತ್ನಿಸಬೇಕಾಗಿದೆ. ಶಾಂತ ಚಳವಳಿಯಿಂದ ಮತ್ತು ಸಾರ್ವಜನಿಕಾಭಿಪ್ರಾಯವನ್ನು ಬಲಗೊಳಿಸುವದರಿಂದ ಈ ಕಠಿತವನ್ನು ಸಾಧಿಸಬಹುದಾಗಿದೆ. ಬಲುಮೆಯಿಂದ ಇಲ್ಲವೆ ಸತ್ಯಾಗ್ರಹದ ಹೆಸರಿನಿಂದ ದುರಾಗ್ರಹ ಹೂಡುವುದರಿಂದ ಇದನ್ನು ಸಾಧಿಸುವದು ಶಕ್ಯವಿಲ್ಲ. ಮಂತ್ರಿಗಳು ಜನತೆಯ ಆಳುಗಳು ಮಂತ್ರಿಪದವನ್ನು ಸ್ವೀಕರಿಸುವದಕ್ಕಿಂತ ಮೊದಲೂ ಅವರ ಬೇಕು ಬೇಡಿಕೆಗಳು ಚಪರಾಸಿಗಳ ಬೇಕುಬೇಡಿಕೆಗಳಾಗಿರಲಿಲ್ಲ. ಚಪರಾಸಿಯು ಮಂತ್ರಿಪದವನ್ನು ವಹಿಸುವಷ್ಟು ಯೋಗ್ಯತೆಯನ್ನು ಪಡೆಯುವದನ್ನೂ ನೋಡಲು ನನಗೊಳ್ಳೆ ಸಂತೋಷ. ಆದರೂ ಅವರು ತಮ್ಮ ತಮ್ಮ ಬೇಕು ಬೇಡಿಕೆಗಳನ್ನು ಹೆಚ್ಚಿಸಿಕೊಳ್ಳುವದು ಬೇಡ. ಪರಮಾವಧಿ ಸಂಬಳವನ್ನೆಲ್ಲ ಮಂತ್ರಿಗಳು ಪಡೆಯಲೆಬೇಕಾದ ಅವಶ್ಯಕತೆಯು ಇಲ್ಲೆಂಬುದನ್ನು ಸ್ಪಷ್ಟವಾಗಿ ತಿಳಿದುಕೊಳ್ಳತಕ್ಕದ್ದು.

ಈ ಪ್ರಶ್ನೆಗಳಿಂದ ಉದ್ಭೂತವಾದ ಒಂದು ವಿಷಯದ ಬಗ್ಗೆ ಮಾತ್ರ ವಿಚಾರ ಮಾಡಬೇಕಾಗಿದೆ. ಲಂಚವನ್ನು ತೆಗೆದುಕೊಳ್ಳದೆ ಚಪರಾಸಿಗೆ ತಿಂಗಳಿಗೆ ೧೫ ರೂಪಾಯಿಗಳಲ್ಲಿ ತನ್ನ ಹಾಗು ತನ್ನ ಕುಟುಂಬದ ಪೋಷಣೆಮಾಡುವದು ಶಕ್ಯವಿದೆಯೆ? ಇಂಥ ಮೋಹಕ್ಕೆ ಅವನು ಬಲಿಬೀಳಬಾರದೆಂದು ಅವನಿಗೆ ಸಾಕಷ್ಟು ಸಂಬಳ ಕೊಡಬೇಕಾಗಿಲ್ಲವೆ? ಇದಕ್ಕೆ ಉಪಾಯವೆಂದರೆ ಶಕ್ಯವಿದ್ದಷ್ಟು ನಾವೇ ನಮ್ಮ ಚಪರಾಸಿಗಳಾಗಬೇಕು. ಹೀಗಿದ್ದರೂ ನಮಗೆ ಚಪರಾಸಿಗಳು ಬೇಕಾದರೆ ಅವರಿಗೆ ಬೇಕಾಗುವಷ್ಟು ಸಂಬಳವನ್ನು ನಾವು ಕೊಡಲಿಕ್ಕೆ ಬೇಕು. ಹೀಗೆ ಮಾಡಿದ್ದಾದರೆ ಮಂತ್ರಿ ಮತ್ತು ಚಪರಾಸಿಗಳ ನಡುವಿರುವ ಮಹದಂತರವು ಇಲ್ಲದಂತಾಗುವದು.

ಮಂತ್ರಿಗಳ ಸಂಬಳವನ್ನು ೫೦೦ ರೂಪಾಯಿಗಳಿಂದ ೧೫೦೦ ರೂಪಾಯಿಗಳ ವರೆಗೆ ಏರಿಸಿದ್ದೇಕೆಂಬುದು ಬೇರೆ ವಿಷಯ. ಆದರೆ ತುಲನೆ ಮಾಡಿ ನೋಡಿದ್ದಾದರೆ ಇದೇನೂ ಅಲ್ಲ ಮತ್ತು ಮುಖ್ಯ ಸಮಸ್ಯೆಯನ್ನು ಬಿಡಿಸಲು ಇದು ಸಹಾಯಕವಾಗದು ಎರಡನೆಯದು ಬಗೆಹರಿದರೆ ಮೊದಲನೆಯದು ತಂತಾನೆ ಬಗೆಹರಿಯುವುದು.

ಹೊಸದಿಲ್ಲಿ ಮೋ. ಕ. ಗಾಂಧಿ
೧೪—೪—೪೬

( ಹರಿಜನಬಂಧುವಿನಿಂದ )

# ಭಾರತದ ಪುತ್ರರತ್ನನ ಕಣ್ಮರೆ

ನಾ. ಶ್ರೀನಿವಾಸ ಶಾಸ್ತ್ರಿಗಳ ನಿಧನದಿಂದ ಭಾರತದ ಪುತ್ರರತ್ನರಲ್ಲೊಬ್ಬರು ನಮ್ಮ ಅದೇಕೆ ಇಡೀ ಜಗತ್ತಿನ ಕಣ್ಮರೆಯಾದರು. ಅವರು ಉಜ್ವಲ ರಾಷ್ಟ್ರಪ್ರೇಮಿಗಳಾಗಿದ್ದರೆಂಬುದನ್ನು ಎಲ್ಲರೂ ಬಲ್ಲರು. ನಾನು ಅವರನ್ನು ಮೊನ್ನೆ ಮದ್ರಾಸದಲ್ಲಿ ಕಂಡಾಗ ಭಾರತ ಮತ್ತು ಅದರ ಸಂಸ್ಕೃತಿಯ ವಿಷಯವಾಗಿಯೆ ಮಾತನಾಡಿದರು. ತಮ್ಮ ಜೀವಮಾನಾವಧಿ ಅವರು ಅದಕ್ಕಾಗಿಯೆ ಹೆಣಗಿದರು. ಮರಣ ಸಮಯದಲ್ಲಿಯೂ ಅವರು ತಮ್ಮ ಬಗೆಗೆ ಆಲೋಚಿಸಿಲ್ಲವೆಂದು ನನಗೆ ನಂಬಿಕೆಯಿದೆ. ಅವರು ಇಂಗ್ಲಿಷಿನಷ್ಟೆ ಸಂಸ್ಕೃತದ ಮೇಲೆಯೂ ಪ್ರಭುತ್ವ ಪಡೆದಿದ್ದರು. ರಾಜಕೀಯ ವಿಷಯದಲ್ಲಿ ಅವರು ನಮ್ಮೊಡನೆ ಮತಭೇದವಿಟ್ಟುಕೊಂಡಿದ್ದರೂ ನಮ್ಮ ಹೃದಯಗಳು ಒಂದಾಗಿದ್ದವು. ಅವರ ರಾಷ್ಟ್ರಭಕ್ತಿ ಬೇರೆ ಯಾವ ರಾಷ್ಟ್ರಭಕ್ತನಿಗೂ ಕಡಿಮೆಯಾಗಿಲ್ಲವೆಂದಿಷ್ಟೆ ಈಗ ಹೇಳಬಲ್ಲೆನು. ಶಾಸ್ತ್ರಿಗಳ ಕಾಯವಳಿದಿದ್ದರೂ ಅವರ ಕೀರ್ತಿ ಉಳಿಯುವದು.

ಹೊಸದಿಲ್ಲಿ ಮೋ. ಕ. ಗಾಂಧಿ
೧೮—೪—೪೬

## ಮದ್ರಾಸ ಶಾಸನ ಸಭೆಯ ಕಾಂಗ್ರೆಸ ಪಕ್ಷದ ಸಭೆ

### ಧುರೀಣರನ್ನಾರಿಸುವಲ್ಲಿ ಮತಭೇದ

ಮದ್ರಾಸ ಶಾಸನಸಭೆಯ ಕಾಂಗ್ರೆಸ ಪಕ್ಷದ ಧುರೀಣರನ್ನಾರಿಸುವ ಸಂಬಂಧದಲ್ಲಿ ಸದಸ್ಯರಲ್ಲಿ ಭಿನ್ನಾಭಿಪ್ರಾಯವಾದ್ದರಿಂದ ಕಾಂಗ್ರೆಸ್ ವರಿಷ್ಠರು ಎಲ್ಲ ದೃಷ್ಟಿಯಿಂದ ವಿಚಾರ ಮಾಡಿ ಸದ್ಯದ ಪರಿಸ್ಥಿತಿಯಲ್ಲಿ ರಾಜಾಜಿಯವರನ್ನೆ ಆರಿಸುವದು ಯುಕ್ತವೆಂದು ಸಲಹೆ ಕೊಟ್ಟಿದ್ದರು. ಇದು ಆದೇಶವಲ್ಲ. ಸದಸ್ಯರು ತಮ್ಮ ಧುರೀಣನನ್ನು ತಾವೇ ಆರಿಸಿಕೊಳ್ಳಬಹುದು ಆದರೆ ರಾಜಾಜಿಯನ್ನು ಬಿಟ್ಟು ಬೇರೆಯವರನ್ನಾರಿಸಿದರೆ ಮೊದಲು ತಮಗೆ ತಿಳಿಸಬೇಕೆಂದು ಸೂಚಿಸಿದರು. ತದನುಸಾರವಾಗಿ ಕಾಂಗ್ರೆಸ ಪಕ್ಷದ ಸಭೆ ೧೮ ನೇ ತಾರೀಕಿಗೆ ಶ್ರೀ ಗಿರಿಯವರ ಅಧ್ಯಕ್ಷತೆಯಲ್ಲಿ ಸೇರಿ ಕಾಂಗ್ರೆಸ್ ವರಿಷ್ಠರ ಸಲಹೆಯನ್ನು ಕೇಳಬಾರದೆಂಬ ಗೊತ್ತುವಳಿ ೩೮ ವಿರುದ್ಧ ೧೪೮ ಮತಗಳಿಂದ ಸ್ವೀಕೃತವಾಯಿತು. ಮತ್ತು ಈ ಗೊತ್ತುವಳಿಯನ್ನು ಕಾಂಗ್ರೆಸ್ ಅಧ್ಯಕ್ಷರಿಗೆ ತಿಳಿಸಿ ಅವರಿಂದ ಉತ್ತರ ನಿರೀಕ್ಷಿಸಿ ೧೯ ನೇ ತಾರೀಕಿಗೆ ಸಭೆ ಮುಂದರಿಸಿತು. ಆದರೆ ೧೯ ನೇ ತಾರೀಕಿನ ದಿವಸ ರಾಷ್ಟ್ರಪತಿಗಳಿಂದ ಉತ್ತರ ಬಾರದ್ದರಿಂದ ಸಭೆಯನ್ನು ೨೦ ನೇ ತಾರೀಕಿಗೆ ಮತ್ತೆ ಮುಂದರಿಸಲಾಯಿತು.

## ಕಾಂಗ್ರೆಸ ಪ್ರತಿನಿಧಿ ಚುನಾವಣೆ

### ಹುಬ್ಬಳ್ಳಿ-ಧಾರವಾಡ-ಬೆಳಗಾವಿಗಳಲ್ಲಿ ಗೊಂದಲ

ಕಾಂಗ್ರೆಸ ಪ್ರತಿನಿಧಿ ಚುನಾವಣೆಯ ದಿನ (ತಾ ೧೯) ಹುಬ್ಬಳ್ಳಿ ಧಾರವಾಡ ಬೆಳಗಾವಿಗಳಲ್ಲಿ ಗೊಂದಲ ಸಂಭವಿಸಿತು. ಹುಬ್ಬಳ್ಳಿಯಲ್ಲಿ ಕೆಲವರು ಸುಳ್ಳು ಹೆಸರಿನಿಂದ ಮತದಾನ ಮಾಡಲು ಬಂದದ್ದು ಗೊತ್ತಾಗಲು ಉಭಯಪಕ್ಷಗಳಲ್ಲಿಯೂ ಗುದ್ದಾಟವಾಯಿತು. ಅದನ್ನು ಬಿಡಿಸಲು ಹುರಿಯಾಳುಗಳೊಬ್ಬರಾದ ಶ್ರೀ ದೇವಪೂರರು ಹೋಗಲು ಅವರಿಗೂ ಹೊಡೆತಗಳು ಬಿದ್ದವು. ಧಾರವಾಡದಲ್ಲಿ ಪ್ರತಿಸ್ಪರ್ಧಿ ಹುರಿಯಾಳಾದ ವೀರಯ್ಯನವರ ಪಕ್ಷದವರು ದಂಗೆಯ ಬೆದರಿಕೆ ಹಾಕಿದ್ದರಿಂದ ಮತದಾನವನ್ನು ನಿಲ್ಲಿಸಲಾಯಿತು. ಬೆಳಗಾವಿಯಲ್ಲಿ ನಗರ ಹಾಗು ಖಾಸಬಾಗ ಮತಗಟ್ಟೆಗಳಲ್ಲಿ ಗೊಂದಲವಾಗಿ ಮತದಾನ ನಿಲ್ಲಿಸಲ್ಪಟ್ಟಿತು. ಟಿಳಕವಾಡಿಯಲ್ಲಿ ಮತಪೆಟ್ಟಿಗೆಯ ಕೀಲಿಯನ್ನು ಮುರಿಯಲಾಗಿತ್ತು. ಹುದಲಿಯಲ್ಲಿ ಮತಪತ್ರಿಕೆಗಳನ್ನು ಸುಟ್ಟುಬಿಡಲಾಯಿತು.

# ಕರ್ನಾಟಕ

## ಧಾರವಾಡ

ಧಾರವಾಡದಲ್ಲಿ ೧೫ ನೇ ತಾರೀಕು ಬಾಂಬೆ ರೆಸ್ಟಾರೆಂಟಿನಲ್ಲಿ ಮುದ್ರಕರ ಮತ್ತು ಪ್ರಕಾಶಕರ ಸಂಘದವರು ಮುಂಬಯಿ ಶಾಸನಸಭೆಗೆ ಆರಿಸಿ ಬಂದ ಶ್ರೀ ಹುಕ್ಕೇರಿಕರರಿಗೆ ಸಂತೋಷಕೂಟವನ್ನೇರ್ಪಡಿಸಿದ್ದರು.

ಹೊಂಬಳದ ಗ್ರಾಮ ಪಂಚಾಯತಿಯವರು ೨೦೦-೩೦೦ ರೂಪಾಯಿ ವೆಚ್ಚ ಮಾಡಿ ಮುಖ್ಯ ಬಾವಿಗಳನ್ನು ಸ್ವಚ್ಛ ಮಾಡಿಸಿ ಸಕಾಲಕ್ಕೆ ನೀರಿನ ಬವಣೆಯನ್ನು ತಪ್ಪಿಸಿದರು. ಊರವರಿಂದ ೧॥ ಸಾವಿರ ರೂಪಾಯಿಗಳನ್ನು ಕೂಡಿಸಿ ಕುಡಿಯುವ ನೀರಿನ ಪ್ರಮುಖ ಕಲ್ಲಿನ ಕೆರೆ ಮತ್ತು ಹೊಸ ಕೆರೆಯ ರೇವೆಯನ್ನು ತೆಗೆಯಿಸಲಿಕ್ಕೆ ಹತ್ತಿದ್ದಾರೆ. ಅದು ಮುಗಿಯಬಹುದು ಆದರೆ ಆ ಕೆರೆ ದುರಸ್ತಿಯಾಗುವದು ಅವಶ್ಯವಿದ್ದು ಸರಕಾರದವರು ಇತ್ತ ಗಮನಿಸಬೇಕಾಗಿದೆ.

ಶ್ರೀ ಬೇಂದ್ರೆಯವರಿಗೆ ನಿಧಿ ಸಮರ್ಪಿಸುವ ಸಮಾರಂಭ ರಾಜಸೇವಾಸಕ್ತ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ ಮೇ ೨೫-೨೬ ಕ್ಕೆ ಧಾರವಾಡದಲ್ಲಿ ನಡೆಯುವವು. ೨೫ ಕ್ಕೆ ಆಧುನಿಕ ಕನ್ನಡ ಸಾಹಿತ್ಯ ಎಂಬ ವಿಷಯವಾಗಿ ಉಪನ್ಯಾಸ ಮಾಲೆ ಹಾಗು ೨೬ ನೇ ತಾರೀಕಿಗೆ ಬೇಂದ್ರೆ ಸಾಹಿತ್ಯದ ಪ್ರಶಸ್ತಿಪರ ಭಾಷಣಗಳು ನಡೆಯುವವು. ವಿ. ಸೀತಾರಾಮಯ್ಯ, ತೀ. ನಂ. ಶ್ರೀಕಂಠಯ್ಯ, ರಾಜರತ್ನಂ, ಕಾರಂತ, ಗೋಕಾಕ ಮೊದಲಾದವರನ್ನು ಆಮಂತ್ರಿಸಲಾಗಿದೆ.

ಅಬ್ಬಿಗೇರಿಯಲ್ಲಿ ಅಖಿಲ ಕರ್ನಾಟಕ ಕುಂಬಾರ ಕಲಾ ವರ್ಧಕ ಪರಿಷತ್ತಿನ ಸ್ವಾಗತ ಸಮಿತಿ ಸಭೆ ಶ್ರೀ ಗುರುಸಿದ್ದಪ್ಪಾ ಬಾಗೇವಾಡಿ ಅಣ್ಣಾವರ ಇವರ ಅಧ್ಯಕ್ಷತೆಯಲ್ಲಿ ಜರುಗಿ ಪರಿಷತ್ತನ್ನು ಧಾರವಾಡದಲ್ಲಿ ಮೇ ತಿಂಗಳ ಮೂರನೆ ವಾರದಲ್ಲಿ ಕೂಡಿಸಬೇಕೆಂದು ನಿರ್ಣಯಿಸಲಾಯಿತು. ಶ್ರೀ ಬಸಪ್ಪ ಭೂಮರಡ್ಡಿ, ವೀರಪ್ಪ ಬಸರೀಗಿಡದ, ಎಸ್ ಆರ್ ಕಂಠಿ, ಎಸ್ ಎನ್ ಅಂಗಡಿಯವರನ್ನು ಮುಖ್ಯ ಅತಿಥಿಗಳಾಗಿ ಆಮಂತ್ರಿಸಬೇಕೆಂದು ಗೊತ್ತಾಗಿದೆ.

## ವಿಜಾಪುರ

ಕರ್ನಾಟಕ ಮಹಾರಾಷ್ಟ್ರ ೮ ನೇ ವೈದ್ಯಕ ಪರಿಷತ್ತು ಹುಬ್ಬಳ್ಳಿಯ ಡಾ. ಗೋರೆ ಇವರ ಅಧ್ಯಕ್ಷತೆಯಲ್ಲಿ ಇದೇ ತಾ. ೨೪-೨೫-೨೬ ತಾರೀಕುಗಳಲ್ಲಿ ವಿಜಾಪುರದಲ್ಲಿ ಜರಗುವದು.

ಗುಳೇದಗುಡ್ಡದಲ್ಲಿಯ ಜೈನ ಸಂಘದವರು ಮಹಾವೀರ ಜಯಂತಿಯನ್ನು ಸಂಭ್ರಮದಿಂದ ಆಚರಿಸಿದರು. ಮಹಾವೀರ ಸ್ವಾಮಿಯವರ ಭಾವಚಿತ್ರದ ಮೆರವಣಿಗೆಯಾದ ನಂತರ ಶ್ರೀ ಬೋಗಾರರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಮುಂಬಯಿ ಜೈನ ಸಭೆಯ ಪ್ರಚಾರಕ ಶ್ರೀ ವಿಷ್ಣು ದತ್ತು ಜಿಯವರು ಮಾತಾಡಿದರು.

ಬೀಳಗೀ ಪೇಠಾದ ಅರಕೇರಿಯಲ್ಲಿ ನೀರಿನ ಕೊರೈಕೆ ಬಗ್ಗೆ ಪ್ರಾಂತ ಸಾಹೇಬರು ಹಾಗು ಕಲೆಕ್ಟರರ ಕಡೆಗೆ ದೂರು ಒಯ್ದರೂ ಇನ್ನೂ ಯಾವ ಪರಿಣಾಮವೂ ಆಗಿಲ್ಲ. ಅರಕೇರಿಯ ನೀರನ್ನು ಇನ್ನೂ ಮೂರು ನಾಲ್ಕು ಗ್ರಾಮ ಅವಲಂಬಿಸಿರುವುದರಿಂದ ಅವೂ ನೀರಿನ ಅರದಿಗೆ ತುತ್ತಾಗಿವೆ. ಅರಕೇರಿಯಲ್ಲಿಯ ಬಾವಿಗಳನ್ನು ಬಳಸದಿದ್ದುದರಿಂದ ನೀರಿಲ್ಲದಂತಾಗಿದೆ.

ಬಾಗಲಕೋಟ ಮುನಸಿಪಾಲಟಿ ಸದಸ್ಯರಾಗಿರುವ ಶ್ರೀ ರಾಮಣ್ಣಾಯಕ ಸೊಲ್ಲಾಪಟ್ಟಿಯವರು ಮುನಸಿಪಾಲಟಿ ಸಭೆಯಲ್ಲಿ ತಮ್ಮನ್ನು ಬಯ್ದು ಅಸಭ್ಯರೀತಿಯಿಂದ ಅಪಮಾನಗೊಳಿಸಿದರೆಂದು ಅದೇ ಸಭೆಯ ಸದಸ್ಯರಾದ ಶ್ರೀ ಶಿಂದೆಯವರು ಪ್ರಾಂತಸಾಹೇಬರಲ್ಲಿ ಫಿರ್ಯಾದ ಮಾಡಿರುವರೆಂದು ಸುದ್ದಿ. ಶ್ರೀ ರಾಮಣ್ಣಾಯಕರ ಮನೆಗೆ ಹೋಗಿ ಗುಂಡು ಹಾರಿಸಿ ಅವರ ಕೊಲೆಯ ಪ್ರಯತ್ನ ಮಾಡಿದ ಆರೋಪಕ್ಕೆ ಶ್ರೀ ಶಿಂದೆಯವರು ಸೆರೆಹಿಡಿಯಲ್ಪಟ್ಟು ಜಾಮೀನ ಮೇಲೆ ಇದ್ದಾರೆ.

ಹಿಪ್ಪರಗಿಯ ಪ್ರಮುಖರು ಮತ್ತು ಶ್ರೀ ಶಂಕರಗೌಡ ಪಡಗಾನೂರು ಇವರು ಇಂಗ್ಲಿಷ ಶಾಲೆಯ ಬಗ್ಗೆ ೨೫೦೦ ರೂಪಾಯಿಗಳನ್ನು ಕೂಡಿಸಿದ್ದಾರೆ. ಈ ಶಾಲೆ ಜೂನ ತಿಂಗಳಿಂದ ಪ್ರಾರಂಭವಾಗತಕ್ಕದ್ದಿದ್ದು ಹಿಂದೀ ಇಂಗ್ಲಿಶ್ ೩ ನೆಯ ಇಯತ್ತೆಯವರೆಗೆ ವರ್ಗ ಪ್ರಾರಂಭವಾಗಲಿದೆ.

## ಬೆಳಗಾವಿ

ಸಂಪಗಾವಿಯಲ್ಲಿ ಮತ್ತು ಸುತ್ತಲಿನ ಹಳ್ಳಿಗಳಲ್ಲಿ ಮೇವಿನ ಅಭಾವವಿದ್ದುದರಿಂದ ರೈತರು ಬಹಳ ಕಂಗಾಲಾಗಿದ್ದಾರೆ. ಹಿಂಡಿ ಹತ್ತಿಕಾಳು ಸಿಕ್ಕದಿದ್ದುದರಿಂದ ದನಗಳ ಸ್ಥಿತಿ ಮತ್ತಷ್ಟು ಕನಿಕರವಾಗಿದೆ.

ಬೆಳಗಾವಿ ಜಿಲ್ಹೆಯ ಮಾಧ್ಯಮಿಕ ಶಾಲೆಗಳಿಂದ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಸಂಸ್ಕೃತದಲ್ಲಿ ಹೆಚ್ಚಿಗೆ ಗುಣಗಳನ್ನು ದೊರಕಿಸಿದವರಿಗೆ ಪ್ರತಿ ವರುಷದ ಶ್ರೀ ನಾರಾಯಣರಾವ ಜೋಶಿ ಇವರ ೫೦ ರೂಪಾಯಿ ಪಾರಿತೋಷಕ ಈ ವರುಷ ಬೆಳಗಾವಿ ಗಿಲಗಂಚಿ ಅರ್ಟಾಳ ಹಾಯಸ್ಕೂಲಿನ ಶ್ರೀ ಆರ್. ಸಿ. ಭೂಸನೂರಮಠ ಇವರಿಗೆ ದೊರೆತಿದೆ.

ಪ್ರತಿ ಅಮವಾಸ್ಯೆ ದಿನ ಚಹಾದಂಗಡಿಗಳನ್ನು ಮುಚ್ಚಬೇಕೆಂದು ಬೆಳಗಾವಿ ಹಾಟೆಲ ಒಡೆಯರ ಸಂಘದವರು ನಿರ್ಣಯಿಸಿರುವರು.

ಬೇಂದ್ರೆ ಸತ್ಕಾರ ನಿಧಿಗೆ ಶ್ರೀಮಂತ ಸರದಾರ ಕೌಜಲಗಿ ದೇಸಾಯರು ೪೦೦ ರೂಪಾಯಿಗಳನ್ನು ಕೊಟ್ಟಿದ್ದಾರೆ.

ಬೆಳಗಾವಿ ಜಿಲ್ಹೆಯ ಪ್ರಸಿದ್ಧ ಕಾಂಗ್ರೆಸ ಕೆಲಸಗಾರರಾದ ಶ್ರೀರಂಗ ಕಾಮತರ ವಿವಾಹವು ೧೨ ನೇ ತಾರೀಖು ಕುಮಾರಿ ಪ್ರಮಿಲಾ ದೇಶಪಾಂಡೆಯವರೊಡನೆ ಸವದತ್ತಿ ತಾಲೂಕಿನ ಸೊಗಲದಲ್ಲಿ ಜರುಗಿತು. ಪ್ರಮಿಲಾ ದೇಶಪಾಂಡೆಯವರೂ ಕಾಂಗ್ರೆಸ ಕಾರ್ಯಕರ್ತರಿದ್ದು ೧೯೪೨ ರಲ್ಲಿ ಕೆಲ ತಿಂಗಳ ಸ್ಥಾನಬದ್ಧರಿದ್ದರು.

ಮುಗಟಖಾನ ಹುಬ್ಬಳ್ಳಿಯ ನರಸಿಂಹ ದೇವಸ್ಥಾನದ ಹತ್ತರ ಮಲಪ್ರಭಾ ನದಿಯ ದಂಡೆಗೆ ಚ್ಯವನ ಮಹರ್ಷಿಗಳ ಯಾಗಭೂಮಿಯಲ್ಲಿ ಶ್ರೀ ವಿಠ್ಠಲ ದೇವಸ್ಥಾನ ನಿರ್ಮಾಣ ಕಾರ್ಯ ಪ್ರಾರಂಭವಾಗಿದೆ. ಭಕ್ತ ಜನರ ಸಹಾಯವನ್ನು ಕೋರಲಾಗಿದೆ.

## ಬಳ್ಳಾರಿ

ಬಳ್ಳಾರಿಯಲ್ಲಿ ಉತ್ತರಾದಿಮಠದಲ್ಲಿ ಶ್ರೀಸತ್ಯಧ್ಯಾನತೀರ್ಥರ ಆರಾಧನೆ ಮೂರು ದಿನ ನಡೆಯಿತು. ಶ್ರೀ ಕೋಲಾರ ರಾಮರಾಯರು ವಿದ್ವಾಂಸರಿಗೆ ವಸ್ತ್ರ ರೂಪಾಯಿ ಮೊದಲಾದವುಗಳನ್ನು ಕೊಟ್ಟು ಸನ್ಮಾನಿಸಿದರು. ವೇದಾಂತ ಪ್ರವಚನಗಳೂ ನಡೆದವು.

ಮಂತ್ರಾಲಯದಲ್ಲಿ ರಾಮನವಮಿ ದಿನ ಮುಂಬಯಿ ಮದ್ರಾಸ ಮೈಸೂರ ಕಡೆಗಳಿಂದ ಬಂದ ಸನಾತನಿಗಳ ಸಭೆ ಶ್ರೀ ಎಚ್ ಕೆ ವೇದವ್ಯಾಸಾಚಾರ್ಯರ ಅಧ್ಯಕ್ಷತೆಯಲ್ಲಿ ಸೇರಿ ಅನೇಕರ ಉಪನ್ಯಾಸಗಳು ನಡೆದವು. ಸನಾತನ ಧರ್ಮದ ಮೇಲೆ ನಡೆದ ದಬ್ಬಾಳಿಕೆಯನ್ನು ಖಂಡಿಸುವ ಗೊತ್ತುವಳಿ ಸ್ವೀಕೃತವಾಯಿತು. ಬ್ರಿಟಿಶ ಮಂತ್ರಿಗಳಿಗೆ ಸನಾತನಿಗಳ ಸ್ಥಿತಿ ತಿಳಿಸಿ ರಕ್ಷಣೆಯ ಆಶ್ವಾಸನ ಬೇಡಲು ರಾಜಾ ಎಸ್ ಗುರುರಾಜಾಚಾರ್ಯರಿಗೆ ಅಧಿಕಾರ ಕೊಡಲಾಯಿತು.

ಬಳ್ಳಾರಿ ಜಿಲ್ಹೆಯಲ್ಲಿ ಮುಂದಿನ ಬೆಳೆ ಬರುವವರೆಗೆ ಅಂದರೆ ಇನ್ನು ೯ ತಿಂಗಳಿಗೆ ೩೮ ಸಾವಿರ ಟನ್ ಅಕ್ಕಿ ೩೦ ಸಾವಿರ ಟನ್ ಜೋಳ ಮತ್ತು ಇತರ ಧಾನ್ಯ ಬೇಕಾಗುತ್ತವೆ. ಈಗ ಸದ್ಯಕ್ಕೆ ನಮ್ಮಲ್ಲಿ ೮ ಸಾವಿರ ಟನ್ ಅಕ್ಕಿ ೨ ಸಾವಿರ ಟನ್ ಇತರ ಧಾನ್ಯಗಳಿವೆ. ಕೊರತೆ ಬೀಳುವ ಧಾನ್ಯಗಳ ಬಗ್ಗೆ ಯೋಗ್ಯ ವ್ಯವಸ್ಥೆ ಮಾಡಲಾಗುವದು. ಜನರು ಅಂಜಬೇಕಾಗಿಲ್ಲ ಎಂದು ಮುಂತಾಗಿ ಕಲೆಕ್ಟರರು ಬಳ್ಳಾರಿಯಲ್ಲಿ ಕೂಡಿದ ಸಾರ್ವಜನಿಕ ಸಭೆಯೊಂದರಲ್ಲಿ ಹೇಳಿದರು. ಜಿಲ್ಹಾ ಬರಗಾಲ ನಿವಾರಣ ಸಮಿತಿಯೊಂದಿಗೆ ಸಹಕರಿಸಲೂ ಕಲೆಕ್ಟರರು ಒಪ್ಪಿದರು.

ಬಳ್ಳಾರಿ ತಾಲೂಕಿನ ಫಿರ್ಕಾ ಹಳ್ಳಿಗಳಲ್ಲಿ ವಾಚನಾಲಯಗಳನ್ನು ಸ್ಥಾಪಿಸಿ ಆಟಪಾಟಾದಿಗಳನ್ನೇರ್ಪಡಿಸಿ ಹಳ್ಳಿಗರನ್ನು ಪ್ರಪಂಚದ ನೂತನ ವಿಷಯಗಳನ್ನರಿಯಲು ಅಸರ ಮಾಡಿ ಕೊಡಲು ವಾಚನಾಲಯ ತೆರೆಯಬಯಸಿದ್ದು ಇದಕ್ಕಾಗಿ ಸುಮಾರು ೪೦೦ ರೂಪಾಯಿಗಳ ವರೆಗೆ ಸಂಗ್ರಹವಾಗಿದೆ. ಆಟಪಾಟಾದಿಗಳಲ್ಲಿ ಜಯ ಹೊಂದಿದವರಿಗೆ ಪೋಲಿಸ ಮುಖ್ಯರು ಬಹುಮಾನ ಹಂಚಿದರು.

## ಉತ್ತರ ಕನ್ನಡ

ಮುಂಬಯಿಯಿಂದ ಸರಕಾರಿ ಗೋದಿಯನ್ನು ಹೇರಿಕೊಂಡು ಕುಮಟೆಗೆ ಬರುತ್ತಿದ್ದ ಹಡಗವೊಂದು ತದಡಿ ಬಂದರದ ಹತ್ತಿರ ತಂಗಿದಾಗ ಕೆಲವು ಸಮುದ್ರಗಳ್ಳರು ಆ ಮಚುವೆಯೊಳಗಿಂದ ೫೦೦ ಕ್ಕೆ ಮೇಲ್ಪಟ್ಟು ಗೋದಿಯ ಚೀಲಗಳನು ಅಪಹರಿಸಿಕೊಂಡು ಹೋದರಾಗಿ ತಿಳಿಯುತ್ತದೆ. ಈ ವರೆಗೆ ಖಾಸಗಿ ಸರಕು ಬೇಕಾದಷ್ಟು ಇಂಥ ಹಡಗಗಳೊಳಗಿಂದ ಮಾಯವಾಗುತಿದ್ದವು ಆದರೆ ಅಧಿಕಾರಿಗಳು ಅತ್ತ ಲಕ್ಷ ಕೊಡದ್ದರಿಂದ ಈಗ ಸರಕಾರೀ ಸರಕೂ ಕಳವಾಗಿಹೋಗಿದೆ.

ಕುಂದಾಪುರ ಸಾವಕಾರರ ೫೦೦೦ ರೂಪಾಯಿ ಸರಕು ಹೇರಿಕೊಂಡು ಮುಂಬಯಿಯಿಂದ ಬಂದ ಮತ್ತೊಂದು ಹಡಗದ ಸುಲಿಗೆಯ ಕತೆ ಇದಕ್ಕೂ ರೋಮಾಂಚಕಾರಿಯಿದೆ. ಮಚವೆಯ ಮೇಲಿನ ತಂಡೇಲನಿಗೆ ೧೦೦೦ ರೂಪಾಯಿ ಕೊಟ್ಟು ಆ ಎಲ್ಲ ಸರಕುಗಳನ್ನು ತದಡಿಯ ಕೆಲ ಕಳ್ಳಪೇಟೆ ವರ್ತಕರು ಗೋಕರ್ಣದ ವ್ಯಾಪಾರಿಗಳ ಸಹಾಯದಿಂದ ಕೆಳಗಿಳಿಸಿಕೊಂಡು ಹಂಚಿಕೊಂಡು ಬಿಟ್ಟರಂತೆ. ಇಷ್ಟೆಲ್ಲ ಕಸ್ಟಮ್ಸ ಅಧಿಕಾರಿಗಳ ತಿಳಿವಳಿಕೆಯಿಂದಲೆ ಆಗಿದೆಯಂತೆ. ಹಡಗದ ವಿಮೆ ಇಳಿಸಿದ್ದರಿಂದ ಬಿರುಗಾಳಿಯಲ್ಲಿ ಮಾಲು ಸಮುದ್ರಪಾಲು ಮಾಡಬೇಕಾಯಿತೆಂದು ಹೇಳಿಬಿಡಿರೆಂದು ನಾವಿನ ಮುಖ್ಯಸ್ಥನಿಗೆ ಉಪದೇಶ ಮಾಡಲಾಯಿತಂತೆ.

ಭಟಕಳದಲ್ಲಿ ಉಡುಪಿ ಖಾನಾವಳಿಯೊಂದರಲ್ಲಿ ಕೆಲಸಕ್ಕಿದ್ದ ಹೆಣ್ಣುಮಗಳೊಬ್ಬಳು ಏಕೋ ತನ್ನ ಮಗನಿಗೆ ಚೂರಿ ಹಾಕಲು ಸಿದ್ಧಳಾಗಿದ್ದಳಂತೆ. ನೋಡಿದ ಜನರು ಅವಳನ್ನು ತಡೆದರು. ಆಗ ಆ ಹೆಣ್ಣುಮಗಳು ತನ್ನ ನಾಲಿಗೆಯನ್ನು ಕಚ್ಚಿಕೊಂಡಳಂತೆ ಈಗ ಅವಳನ್ನು ಕಾರವಾರ ಆಸ್ಪತ್ರೆಗೆ ಹಾಕಿದ್ದಾರಂತೆ.

## ಕನ್ನಡ ಸಂಸ್ಥಾನ

ಕುಕನೂರಿನ ಜಮೀನದಾರರಾದ ಶ್ರೀ ಶ್ರೀನಿವಾಸರಾಯರು ಪಟ್ವಾರಿ ಇವರು ವಿದ್ಯಾನಂದ ಗುರುಕುಲಕ್ಕೆ ಸುಮಾರು ೧೫೦೦ ರೂಪಾಯಿ ಬೆಲೆಬಾಳುವ ಒಂದು ಹೊಲ ದಾನ ಮಾಡಿದ್ದಾರೆ.

ರಾಮದುರ್ಗದ ಪಂಡಿತ ಮಾಧವೇಶಾಚಾರ್ಯರು ಕುಕನೂರಲ್ಲಿ ೧೮ ಬ್ರಾಹ್ಮಣ ಬಾಲಕರ ಉಪನಯನ ವಿಧಿಯನ್ನು ಧರ್ಮಾರ್ಥವಾಗಿ ನೆರವೇರಿಸಿದರು.

ಆತಕೂರಲ್ಲಿ ತಾ ೩-೪-೫ ನೇ ದಿನಗಳಲ್ಲಿ ಶ್ರೀಮನ್ಮಧ್ವ ಸಿದ್ಧಾಂತಾಭಿವೃದ್ಧಿಕಾರಿಣೀ ಸಭೆ ಶ್ರೀಮದುತ್ತರಾದಿಮಠದ ಶ್ರೀಗಳಾದ ಶ್ರೀ ಸತ್ಯಾಭಿಜ್ಞ ಶ್ರೀಪಾದಂಗಳವರ ಸನ್ನಿಧಾನದಲ್ಲಿ ಜರುಗಿತು. ಶ್ರೀ ಸತ್ಯಪ್ರಜ್ಞತೀರ್ಥರ ಮಹಾಸಮಾರಾಧನೆಯೂ ವಿಜೃಂಭಣೆಯಿಂದ ಜರುಗಿತು. ವೇದಾಂತ ವಿಷಯಕ ಉಪನ್ಯಾಸಗಳೂ ಆದುವು.

ಆತಕೂರಲ್ಲಿ ೪ ನೇ ತಾರೀಕು ಅಖಿಲ ಭಾರತದ ವೈದಿಕ ಮಹಾಮಂಡಲವೆಂಬ ಸಂಸ್ಥೆ ಸ್ಥಾಪಿತವಾಯಿತು. ಈ ಬಗೆಗೆ ದಾದಾಚಾರ್ಯ ಕಾಳೆ, ವರಖೇಡಿ ನರಸಿಂಹಾಚಾರ್ಯ ಮೊದಲಾದವರ ಭಾಷಣಗಳಾದವು. ಈ ಮಂಡಲಕ್ಕೆ ಶ್ರೀ ಚಿಂಚೋಳಿ ಕೃಷ್ಣಾಚಾರ್ಯರನ್ನು ಅಧ್ಯಕ್ಷರನ್ನಾಗಿಯೂ ಶ್ರೀ ಮಾಹುಲಿ ಗೋಪಾಳಾಚಾರ್ಯರನ್ನು ಕಾರ್ಯಾಧ್ಯಕ್ಷರನ್ನಾಗಿಯೂ ಆರಿಸಲಾಯಿತು.

ಶ್ರೀ ಸನ್ನತಿಕ್ಷೇತ್ರದಲ್ಲಿ ಶ್ರೀ ಚಂದಲಾಂಬಾ ಸೇವಾ ಸಂಘದ ಪರವಾಗಿ ಶ್ರೀ ಚಂದಲಾ ಪರಮೇಶ್ವರಿಯ ಉತ್ಸವವು ಚೈತ್ರ ಬಹುಳ ಪ್ರತಿಪದೆಯಿಂದ ಸಪ್ತಮಿವರೆಗೆ ವಿಜೃಂಭಣೆಯಿಂದ ಜರುಗಿತು.

ಕಲಬುರ್ಗಿಯ ಕನ್ನಡ ಸಾಹಿತ್ಯ ಸಂಘದ ಕಟ್ಟಡ ನಿಧಿಯ ಸಹಾಯಾರ್ಥವಾಗಿ ಹಿರೂರಿನ ಶ್ರೀ ಭೋಗೇಶ್ವರ ನಾಟ್ಯ ಸಂಘದವರು ಸ್ವತಃ ನಾಟಕವಾಡಿ ೬೦೦ ರೂಪಾಯಿ ಸಹಾಯ ಮಾಡಿದರು. ಇದೇ ನಾಟಕದ ಒಡೆಯರು ಅನಾಥಗೃಹಕ್ಕೆ ಉಷಾ ನಾಟಕದ ಉತ್ಪನ್ನವನ್ನು ಅಂದರೆ ೪೦೦ ರೂಪಾಯಿಗಳನ್ನು ಕೊಟ್ಟರು.

## ಶ್ರೀ ಕರಮರಕರರ ಚಟುವಟಿಕೆಗಳು

ಕೇಂದ್ರ ಶಾಸನ ಸಭೆಯ ಸದಸ್ಯರಾದ ಶ್ರೀ ಡಿ. ಪಿ. ಕರಮರಕರರು ದಿಲ್ಲಿಯಲ್ಲಿ ತಾ ೭ ನೆಯ ದಿನ ಸರದಾರ ವಲ್ಲಭಭಾಯಿಯವರನ್ನು ಕಂಡು ಕರ್ನಾಟಕ ಏಕೀಕರಣ ಹಾಗು ೧೯೪೨ ರಲ್ಲಿ ಪೋಲೀಸರು ಮಾಡಿದ ಅತ್ಯಾಚಾರದ ವಿಚಾರಣೆಯ ವಿಷಯವಾಗಿ ಚರ್ಚೆ ಮಾಡಿದರು. ತಾ॥ ೮ ನೆಯ ದಿನ ಹಿಂದುಸ್ತಾನ ಸರಕಾರದ ಶಿಕ್ಷಣ ಕಾರ್ಯದರ್ಶಿಗಳಾದ ಡಾ. ಸಾರ್ಜಂಟರನ್ನು ಭೆಟ್ಟಿಯಾಗಿ ಕರ್ನಾಟಕಕ್ಕೆ ಪ್ರತ್ಯೇಕ ಪುರಾಣ ವಸ್ತು ವಿಭಾಗ ಹಾಗು ಪುರಾಣ ವಸ್ತು ಸಂಗ್ರಹಾಲಯವಿರಬೇಕೆಂದೂ ಇನ್ನೂ ಪ್ರಸಿದ್ಧವಾಗದ ಶಿಲಾಲೇಖಗಳನ್ನು ಕೂಡಲೆ ಪ್ರಸಿದ್ಧಿಸುವ ಏರ್ಪಾಡು ಆಗಬೇಕೆಂದೂ ಸೂಚಿಸಿದರು. ಡಾ. ಸಾರ್ಜಂಟರು ಕೂಡಲೆ ವಿಚಾರಿಸುವದಾಗಿ ಆಶ್ವಾಸನವಿತ್ತರು. ತಾ॥ ೧೦ ರಲ್ಲಿ ಹಿಂದುಸ್ತಾನ ಸರಕಾರದ ಸುದ್ದಿ ಖಾತೆಯ ಮಂತ್ರಿಗಳಾದ ಸರ ಅಕಬರ ಹೈದರಿಯವರನ್ನು ಸಂದರ್ಶಿಸಿ ಬಾನುಲಿಯಲ್ಲಿ ಕನ್ನಡಕ್ಕೆ ತಕ್ಕ ಸ್ಥಾನ ಕಲ್ಪಿಸಿಕೊಡಬೇಕೆಂದು ಸೂಚಿಸಿದರು. ಅದಕ್ಕೆ ಸರ ಅಕಬರ ಹೈದರಿಯವರು ಕನ್ನಡ ನಾಡಿಗಾಗಿ ಸ್ವತಂತ್ರ ಬಾನುಲಿ ಕೇಂದ್ರವನ್ನು ಸ್ಥಾಪಿಸುವ ಕಾರ್ಯವನ್ನು ಕೂಡಲೆ ಕೈಕೊಳ್ಳುವೆವೆಂದು ಆಶ್ವಾಸನವಿತ್ತರು. ಮಾತುಕತೆಗಳ ಪರಿಣಾಮವಾಗಿ ಮದ್ರಾಸ ಇಲ್ಲವೆ ಮುಂಬಯಿ ಬಾನುಲಿ ನಿಲ್ದಾಣದಿಂದ ವಾರಕ್ಕೊಂದಾವರ್ತಿ ಕನ್ನಡ ಭಾಷಣದ ಏರ್ಪಾಡು ಆಗಲಿರುವದೆಂದು ತಿಳಿಯುತ್ತದೆ.

---

ದಾವಣಗೇರಿಯಲ್ಲಿ ಬೆಳ್ಳಿ ಹಬ್ಬದ ವಾಚನಾಲಯದಲ್ಲಿ ಶ್ರೀ ಚನ್ನಗಿರಿ ರಂಗಪ್ಪನವರ ಅಧ್ಯಕ್ಷತೆಯಲ್ಲಿ ಊರಿನ ಪ್ರತಿಷ್ಠಿತ ನಾಗರಿಕರ ಸಭೆ ಸೇರಿ ಚಿತ್ರದುರ್ಗ ಜಿಲ್ಹೆಯ ಬರಗಾಲ ಸಂತ್ರಸ್ತರಿಗೆ ಸಹಾಯ ಮಾಡಲು ಸಮಿತಿಯೊಂದನ್ನು ಸ್ಥಾಪಿಸಲಾಯಿತು. ಇದಕ್ಕೆ ಶ್ರೀ ಹರಳಿಣ್ಣೆ ಕೊಟ್ರಬಸಪ್ಪನವರು ಅಧ್ಯಕ್ಷರು ಬೊಂದಾಡೆ ಹನುಮಪ್ಪ ಮತ್ತು ರಾಂಚಿ ವೀರಪ್ಪನವರು ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟರು.

ಮಿರಜಿ ಶಾಸನ ಸಭೆಯ ಅಧಿವೇಶನ ಮೇ ೨೧ ರಿಂದ ಪ್ರಾರಂಭವಾಗುತ್ತದೆಂದು ತಿಳಿಯುತ್ತದೆ. ಮುಂಗಡ ಪತ್ರಿಕೆಯ ಅಧಿವೇಶನವಾದ್ದರಿಂದ ಒಂದು ವಾರ ನಡೆಯುವದು.

ಕೊಲ್ಹಾಪುರ ಮತ್ತು ದಕ್ಷಿಣ ಸಂಸ್ಥಾನಗಳ ಸಂಯುಕ್ತ ಹಾಯಕೋರ್ಟಿನ ಮುಖ್ಯ ನ್ಯಾಯಾಧೀಶ ಶ್ರೀ ದಿವೇಟಿಯ ಇವರು ಸಂಸ್ಥಾನಗಳಲ್ಲಿ ಪ್ರವಾಸ ಕೈಕೊಂಡಿದ್ದು ಬಿಡುವಿನ ದಿನಗಳು ಮುಗಿದ ಮೇಲೆ ಕೆಳ ಕೋರ್ಟುಗಳನ್ನು ತಪಾಸ ಮಾಡುವರು. ದಿವೇಟಿಯವರು ದಕ್ಷಿಣ ಸಂಸ್ಥಾನದ ನ್ಯಾಯಾಧೀಶರನ್ನು ಬ್ರಿಟಿಶ ಪ್ರಾಂತಗಳ ನ್ಯಾಯಾಧೀಶರ ಮಟ್ಟಕ್ಕೆ ತರಲು ಪ್ರಯತ್ನಿಸುತಿರುವರು.

ಮೈಸೂರ ಸಂಸ್ಥಾನದ ಆಸ್ಥಾನ ವಿದ್ವಾಂಸರೂ ಪಂಡಿತರತ್ನರೂ ಆಗಿದ್ದ ಶ್ರೀ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳು ತಮ್ಮ ವಯಸ್ಸಿನ ೮೫ ನೇ ವರ್ಷದಲ್ಲಿ ನಿಧನ ಹೊಂದಿದರೆಂದು ತಿಳಿಸಲು ವಿಷಾದವೆನಿಸುತ್ತದೆ. ಶಾಸ್ತ್ರಿಗಳು ಕನ್ನಡ ಮತ್ತು ಸಂಸ್ಕೃತದಲ್ಲಿ ಒಳ್ಳೆ ಪಂಡಿತರಾಗಿದ್ದರು. ಅನೇಕ ಗ್ರಂಥಗಳನ್ನು ಪ್ರಬಂಧಗಳನ್ನು ಬರೆದಿರುವರು.

ಕರ್ನಾಟಕದ ಹಿರಿಯ ಕಾರ್ಯಕರ್ತರೂ ಸಾಂಗಲಿ ಸಂಸ್ಥಾನದ ಪ್ರಥಮ ಲೋಕನಿಯುಕ್ತ ಮಂತ್ರಿಗಳೂ ಆಗಿದ್ದ ಶಿರಹಟ್ಟಿಯ ಶ್ರೀ ಅಶ್ವತ್ಥರಾವ ಮಹಿಷಿಯವರು ಮೋಟರ ಅಪಘಾತದಲ್ಲಿ ಗಾಯಗೊಂಡು ತಾ. ೧೨ ನೇ ದಿನ ಸ್ವರ್ಗಸ್ಥರಾದರು. ಮರಣ ಕಾಲಕ್ಕೆ ಇವರ ವಯಸ್ಸು ೭೬ ಇದ್ದವು. ಇವರ ಬಗ್ಗೆ ಅನೇಕ ಕಡೆ ದುಃಖಪ್ರದರ್ಶಕ ಗೊತ್ತುವಳಿ ಸ್ವೀಕೃತವಾಗಿವೆ. ಇವರ ಮರಣದಿಂದ ಕರ್ನಾಟಕದ ವಿಶೇಷತಃ ಸಾಂಗಲಿ ಸಂಸ್ಥಾನದ ಪ್ರಮುಖ ಕಾರ್ಯಕರ್ತರಿಲ್ಲದಂತಾಯಿತು. ಪರಮಾತ್ಮನು ಇವರ ಆತ್ಮಕ್ಕೆ ಚಿರ ಶಾಂತಿಯನ್ನೀಯಲಿ.

## ಮುಂಬಯಿ

ಶ್ರೀ ಶಿವರಾಮಪಂತ ಕರಂದೀಕರರು ಮರಾಠಿಯಲ್ಲಿ ಬರೆದಿರುವ ಬ್ಯಾ. ಸಾವರಕರರ ಜೀವನ ಚರಿತ್ರೆಯ ಮೇಲಿನ ನಿರ್ಬಂಧವನ್ನು ಹಿಂತೆಗೆದುಕೊಳ್ಳಲಾಗಿದೆ.

ಸಾತಾರೆ ಜಿಲ್ಲೆಯ ರಾಷ್ಟ್ರಸೇವಾ ದಳದ ಮೇಲಿನ ನಿರ್ಬಂಧವನ್ನು ಮುಂಬಯಿ ಸರಕಾರದವರು ತೆಗೆದುಹಾಕಿದ್ದಾರೆ. ೧೯೪೨ ಅಗಸ್ಟದಲ್ಲಿ ಈ ನಿರ್ಬಂಧ ಹೇರಲಾಗಿತ್ತು.

೧೯೪೨ ಚಳವಳಿಯಲ್ಲಿ ತಮ್ಮ ಮನಸಿಲ್ಲದೆ ಹಾನಿಗೊಳಗಾದವರಿಗೆ ಪರಿಹಾರ ಕೊಡಲು ಮುಂಬಯಿ ಸರಕಾರವು ನಿರ್ಧರಿಸಿದೆಂದು ಮಾನ್ಯ ಮುರಾರಜಿ ದೇಸಾಯರು ಹೇಳಿದರು. ಪುಂಡಗಂದಾಯವನ್ನು ಹೇಗೆ ತಿರುಗಿಕೊಡಬೇಕೆಂಬ ಬಗ್ಗೆ ವಿಚಾರ ನಡೆಸಿ ತೆಂದೂ ತುರ್ತಾಗಿ ಸುಧಾರಣೆ ಮಾಡುವೆನೆಂದೂ ಅವರು ಹೇಳಿದರು.

ಧಾರವಾಡದ ಯುನಾಯಿಟೆಡ್ ಕರ್ನಾಟಕ ಇನ್ಶ್ಯೂರನ್ಸ ಕಂಪನಿಯ ಶಾಖಾ ಕಚೇರಿಯ ಪ್ರಾರಂಭೋತ್ಸವ ನ್ಯಾಯಮೂರ್ತಿ ಲೋಕೂರರ ಹಸ್ತದಿಂದ ಫಿರೋಜಶಹಾ ಮೇಥಾ ರೋಡಿನಲ್ಲಿ ಒಂದು ಕಟ್ಟಡದಲ್ಲಿ ರಾಮನವಮಿಯ ಶುಭ ಮುಹೂರ್ತದಲ್ಲಿ ನಡೆಯಿತು. ಶ್ರೀ ಕೆ. ಎಚ್. ಕಬ್ಬೂರ ಮೊದಲಾದ ಅನೇಕ ಕನ್ನಡಿಗರು ಸಮಾರಂಭಕ್ಕೆ ಬಂದಿದ್ದರು. ಕಂಪನಿಯ ಚೆಅರಮನ್‌ರಾದ ಡಾ. ಬ. ಬಿ. ಎಸ್. ಸಾವಕಾರರು ಪ್ರಾಸ್ತಾವಿಕವಾಗಿ ನಾಲ್ಕು ಮಾತು ಹೇಳಿದ ನಂತರ ಶಾಖಾ ಕಚೇರಿಯನ್ನು ನ್ಯಾಯಮೂರ್ತಿಗಳು ತೆರೆದು ಯಶಸ್ಸನ್ನು ಕೋರಿದರು.

ಮುಂಬಯಿಯಲ್ಲಿ ೧೩ನೇ ತಾರೀಕು ಒಂದು ಸಿನೇಮಾ ಮಂದಿರದಲ್ಲಿ 'ಅಂ ಕೋರ್ಟ' ಎಂಬ ಹೊಸ ಚಿತ್ರಪಟದ ಪ್ರದರ್ಶನ ನಡೆದಾಗ ಅದರಲ್ಲಿ ಕೊನೆಗೆ ಬರುವ ರಾಷ್ಟ್ರಧ್ವಜದಿಂದ ಯುಕ್ತವಾದ ಹಿಂದುಸ್ತಾನದ ನಕಾಶೆಗೆ ಕೆಲ ಮುಸಲ್ಮಾನರು ಆಕ್ಷೇಪ ತೆಗೆದುಕೊಂಡು ರಂಗಸ್ಥಳ ಹತ್ತಿಹೋಗಿ ಪರದೆ ಹರಿದು ೧೦-೧೨ ಗಾದಿ ಕುರ್ಚಿಗಳನ್ನು ನಾಶಪಡಿಸಿದರು. ಪೋಲೀಸರು ಇಬ್ಬರನ್ನು ಸೆರೆಹಿಡಿದರು. ಆದರೆ ಅದರಲ್ಲೊಬ್ಬನು ಪೋಲೀಸರ ಮೇಲೆಯೆ ಏರಿಹೊದ್ದರಿಂದ ಅವನಿಗೆ ಗಾಯವಾಯಿತು. ಮರುದಿನವೂ ಮುಸಲ್ಮಾನರು ಗದ್ದಲ ಹಾಕಿದ್ದರಿಂದ ಈ ಚಿತ್ರಪಟ ನಿಲ್ಲಿಸಲಾಗಿದೆ.

ಮುಂಬಯಿ ಸರಕಾರದವರು ಪ್ರಕಟನೆಯೊಂದನ್ನು ಹೊರಡಿಸಿ ಲಂಚಗುಳಿತನ ನಿರ್ಮೂಲ ಮಾಡಲು ಸರಕಾರದವರು ನಿರ್ಧರಿಸಿದ್ದು ಜನತೆ ಈ ಬಗ್ಗೆ ಮಾಹಿತಿ ಕೊಡಲು ಮುಂದೆ ಬರಬೇಕೆಂದು ಕೇಳಿಕೊಂಡಿದ್ದಾರೆ. ಲಂಚ ಕೊಡುವದು ಕಾಯದೆ ರೀತ್ಯಾ ಅಪರಾಧವಾಗಿದೆ. ಅದರೂ ಲಂಚದಿಂದ ಬಗ್ಗೆ ಮಾಹಿತಿ ಕೊಡುವವರಿಗೆ ಸರಕಾರದವರು ಎಲ್ಲ ಬಗೆಯ ಸಂರಕ್ಷಣೆ ಕೊಡುವದಾಗಿ ಸಾರಿದ್ದಾರೆ.

ಮುಂಬಯಿ ಟೆನೆನ್ಸಿ ಕಾಯದೆ ಕೆಲ ಭಾಗಗಳಲ್ಲಿ ಮಾತ್ರ ಇಷ್ಟು ದಿನ ಜಾರಿಯಲ್ಲಿದ್ದಿತು. ಅದು ಈಗ ಇಡೀ ಪ್ರಾಂತಕ್ಕೆ ಅದನ್ನು ೧೨ ನೇ ಎಪ್ರಿಲದಿಂದ ಜಾರಿಯಲ್ಲಿ ತರಲಾಗಿದೆ.

ಶನಿವಾರ ೧೩ ನೇ ತಾರೀಕು ಸಾಯಂಕಾಲ ೭॥ ಗಂಟೆಗೆ ಮುಂಬಯಿ ಕ್ಯಾಸೆಲ್‌ಬರಾಕ್ಸದಲ್ಲಿ ಬಾಂಬ ಸ್ಫೋಟವಾಗಿ ಒಬ್ಬ ನಾವಿಕ ಸೈನಿಕನು ಅಲ್ಲಿಯೇ ಸತ್ತಿನಲ್ಲದೆ ೫ ಜನರಿಗೆ ಗಾಯಗಳಾದವು.

ಮಾತುಂಗಾ ಜಿ. ಆಯ. ಪಿ. ರೇಲ್ವೆ ವರ್ಕಶಾಪದಲ್ಲಿಯ ೪೫೦೦ ರೇಲ್ವೆ ಕೆಲಸಗಾರರು ಸಂಬಳ ಬಡತಿ ನೌಕರಿ ಅವಧಿಗನುಸಾರವಾಗಿ ಬಡತಿ ಸಿಕ್ಕುವದಕ್ಕಾಗಿ ೧೫ ನೇ ತಾರೀಕಿನಿಂದ ಸಂಪು ಹೂಡಿರುವರು.

ಮುಂಬಯಿ ಪ್ರಾಂತದಲ್ಲಿ ಬೆಲ್ಲ ಸಿದ್ಧವಾಗುವ ಜಿಲ್ಲೆಗಳಿಂದ ನಿರ್ದಿಷ್ಟ ಪ್ರಮಾಣದಲ್ಲಿಯ ಬೆಲ್ಲ ನಿರ್ಯಾತ ಮಾಡಲು ಸರಕಾರದವರು ನಿರ್ಧರಿಸಿದ್ದಾರೆ. ಇದಾಗುವ ವರೆಗೆ ಆಯಾ ಜಿಲ್ಲೆಗಳಿಂದ ಬೆಲ್ಲವನ್ನೇ ಕಳಿಸಬಾರದೆಂದು ವಿಧಿಸಿದ್ದಾರೆ.

ಮಾನ್ಯ ಮುರಾರಜಿ ದೇಸಾಯರು ಅಹಮದಾಬಾದದಲ್ಲಿ ರಾಷ್ಟ್ರೀಯ ಸಪ್ತಾಹದ ಕೊನೆಯ ದಿನದ ಆಚರಣೆಯ ಸಭೆಯಲ್ಲಿ ಮಾತಾಡುತ್ತ ದಿಲ್ಲಿಯ ವಿಚಾರವಿನಿಮಯ ಯಶಸ್ವಿಯಾಗಲಿ ಆಗದಿರಲಿ ಹಿಂದುಸ್ತಾನ ಸ್ವಾತಂತ್ರ್ಯವನ್ನು ಸಮೀಪಿಸಿದೆಂಬುದು ಸಿದ್ಧವಾಗಿದೆ. ದಾಕ್ಕದಲ್ಲಿ ಕೊಳೆಯುತ್ತಿರುವ ಹಿಂದುಸ್ತಾನದ ಕೊನೆಯ ರಾಷ್ಟ್ರೀಯ ಸಪ್ತಾಹವಿದೆಂದೂ ಅವರು ಹೇಳಿದರು.

# ಹಿಂದುಸ್ತಾನ

## ಮದ್ರಾಸ

ಶ್ರೀ ನಾರಾಯಣದಾಸ ಗಿರಿಧರದಾಸರ ನಿಧನದಿಂದ ತೆರವಾದ ಸ್ಥಳಕ್ಕೆ ಮದ್ರಾಸ ವಿಧಿಮಂಡಳ ಚುನಾವಣೆಯಲ್ಲಿ ಕಾಂಗ್ರೆಸ್ಸಿನ ಶ್ರೀಮತಿ ರಾಧಾಬಾಯಿ ಸುಬ್ಬರಾಯನ್‌ರು ಟಿ. ಕೆ. ಪಿಳ್ಳೆಯವರನ್ನು ಸೋಲಿಸಿ ಆರಿಸಿಬಂದರು. ಪಿಳ್ಳೆಯವರಿಗೆ ಕೇವಲ ೧೪೪ ಮತ ಬಿದ್ದು ಇಡುಗಂಟು ಕಳೆದುಕೊಂಡರು.

ಕಳೆದ ಶನಿವಾರ ತಮಿಳ ಹೊಸ ವರ್ಷವಿದ್ದದ್ದರಿಂದ ಬಿಡುವು ಕೊಡಿರೆಂದು ಕೇಳಿದ್ದಕ್ಕೆ ನಿರಾಕರಿಸಲು ಮದ್ರಾಸ ಸ್ಪೆನ್ಸರ ಮತ್ತು ಕಂಪನಿಯ ಸಂಪಾರು ೧೦೦೦ ಕೆಲಸಗಾರರು ಶುಕ್ರವಾರ ಸಂಜೆಗೆ ಧರಣೆಸಂಪು ಹೂಡಿ ಶನಿವಾರ ಕೆಲಸಕ್ಕೆ ಬರುವದನ್ನು ಬಿಟ್ಟರು. ಕೂಲಿಕಾರ ಕಮೀಶನರರನ್ನು ಕಂಡು ದೂರುಕೊಂಡರೆ ಅವರು ವ್ಯವಸ್ಥಾಪಕರನ್ನು ಕಂಡು ಬಗೆಹರಿಸಿಕೊಳ್ಳಿರೆಂದು ತಿಳಿಸಿದರಂತೆ.

ಮದ್ರಾಸ ಸರಕಾರದವರು ಶಿವಗಂಗಾ ಖಟ್ಲೆಯಲ್ಲಿ ಅತ್ಯಾಚಾರದ ಬಗ್ಗೆ ಶಿಕ್ಷೆಗೆ ಗುರಿಯಾದ ೩೪ ಜನರನ್ನು ಬಂಧಮುಕ್ತ ಮಾಡಲು ವಿಧಿಸಿದ್ದಾರೆ.

ಗೋದಾವರಿ ನದಿಯ ಮೇಲೆ ೬೬ ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಿ ರಾಮಪಾದ ಸಾಗರ ಯೋಜನೆಯನ್ನು ಕಟ್ಟಿಸಲಿರುವರು. ಇದರಿಂದ ಗುಂಟೂರ ಕೃಷ್ಣಾ ಪೂರ್ವ ಮತ್ತು ಪಶ್ಚಿಮ ಗೋದಾವರಿ ಹಾಗು ವಿಶಾಖಾಪಟ್ಟಣ ಈ ಐದು ಜಿಲ್ಲೆಗಳಿಗೆ ನೀರು ದೊರೆಯುವದು. ೧-೧॥ ಲಕ್ಷ ಕಿಲೋವ್ಯಾಟಷ್ಟು ವಿದ್ಯುತ್ ಶಕ್ತಿ ದೊರೆಯುವದು. ಈ ಯೋಜನೆ ಪೂರ್ಣವಾಗಬೇಕಾದರೆ ೧೨ ವರ್ಷ ಹತ್ತುವದು. ಇದು ಮುಗಿಯಿತೆಂದರೆ ಹಿಂದುಸ್ತಾನದಲ್ಲಿ ಅಕ್ಕಿಯ ಕೊರತೆಯಿಲ್ಲದಂತಾಗುವದು.

## ಮಧ್ಯಪ್ರಾಂತ

ಖಾಂಡವಾ ಹತ್ತರ ಒಂದು ಹಳ್ಳಿಯಲ್ಲಿ ಕ್ರಿಶ್ಚನ್‌ರಿಗೂ ಹಳ್ಳಿಗರಿಗೂ ಹೊಡೆದಾಟ ಸಂಭವಿಸಿ ಒಬ್ಬ ಸತ್ತಿದ್ದು ೭ ಜನರಿಗೆ ಗಾಯಗಳಾಗಿವೆ.

ನಾಗಪುರ ಹಾಯಕೋರ್ಟಿನ ನ್ಯಾಯಾಧೀಶ ವನಿಯನ ಬೋಸ ಮತ್ತು ಪುರಾಣಿಕ ಇವರು ನಾಗಪುರದ ಕಾಂಗ್ರೆಸ ದೈನಿಕ ಪತ್ರಿಕೆಯಾದ ನಾಗಪುರ ಟಾಯಿಮ್ಸ ಪತ್ರಿಕೆಯ ೪೫೦೦ ರೂಪಾಯಿ ಠೇವನ್ನು ಸರಕಾರದವರು ಜಪ್ತಮಾಡಿದ್ದನ್ನು ರದ್ದುಪಡಿಸಿದರು. ೩ ನೇ ನ್ಯಾಯಾಧೀಶ ಪೋಲಕರು ಭಿನ್ನಾಭಿಪ್ರಾಯ ವ್ಯಕ್ತಪಡಿಸಿದರು. ಕಾಂಗ್ರೆಸ್ಸಿಗೇ ಮತಕೊಡಿರಿ ಎಂದು ಪ್ರಚಾರ ಮಾಡಿದ್ದ ಪತ್ರಿಕೆಯ ಮೇಲಿನ ಆರೋಪ

## ಬಿಹಾರ

ಭಾಗಲಪುರದ ಕಾಂಗ್ರೆಸ ಧುರೀಣರಾದ ಶ್ರೀ ರಾಮಸಿಂಗ ಇವರ ಮೇಲಿನ ವಾರಂಟು ರದ್ದಾಗಿ ಅವರು ಈಗ ಪ್ರಕಟರಾಗಿರುವರು. ಸರಕಾರದವರು ಇವರ ಬಂಧನಕ್ಕೆ ೧೦ ಸಾವಿರ ರೂಪಾಯಿ ಜಾಹೀರ ಮಾಡಿದ್ದರು.

ಪಾಟಣಾದ ಸರ್ಚಲಾಯಿಟ ಹಾಗು ರಾಷ್ಟ್ರವಾಣಿ ಪತ್ರಿಕೆಗಳ ಜಪ್ತ ಮಾಡಿದ ಜಾಮೀನ ಹಣವನ್ನು ತಿರುಗಿ ಕೊಡಲು ಸರಕಾರದವರು ಅಪ್ಪಣೆ ವಿಧಿಸಿದ್ದಾರೆ.

ಪಂಜಾಬ ಮೇಲ ಅಪಘಾತದ ಖಟ್ಲೆಯ ವಿಚಾರಣೆಯಲ್ಲಿ ಶ್ರೀಕಾಂತ ಅಜದ ಇವರ ದೇಹಾಂತ ಶಿಕ್ಷೆ ಮತ್ತು ಶತ್ರುಸೇನ ಸಿಂಗ ಮತ್ತು ತಿವಾರಿಯರ ಜೀವಾವಧಿ ಶಿಕ್ಷೆಯನ್ನು ಹಾಯಕೋರ್ಟಿನವರು ಸ್ಥಿರಪಡಿಸಿದರು. ಉಳಿದ ಮೂವರ ಬಗ್ಗೆ ಭಿನ್ನಾಭಿಪ್ರಾಯವಾದ್ದರಿಂದ ಮೂರನೆ ನ್ಯಾಯಾಧೀಶರಲ್ಲಿ ಅವರ ವಿಚಾರಣೆ ನಡೆಯುವದು. ವಿಧ್ವಂಸನ ಚಟುವಟಿಕೆಗಳ ಪರಿಣಾಮವಿದೆಂದು ನ್ಯಾಯಾಧೀಶರ ಅಭಿಪ್ರಾಯ. ಈ ಅಪಘಾತ ೧೯೪೨ ನೆ ನವಂಬರ ೩೩ ಕ್ಕೆ ಸಂಭವಿಸಿ ೮ ಜನ ಮರಣ ಹೊಂದಿ ೪೭ ಜನರಿಗೆ ಗಾಯಗಳಾಗಿದ್ದವು.

ಬಿಹಾರದ ಮುಖ್ಯ ಮಂತ್ರಿಗಳು ಪ್ರಾಂತದಲ್ಲಿ ೧೨ ವರ್ಷಗಳ ವರೆಗೆ ಶಿಕ್ಷೆ ವಿಧಿಸಲ್ಪಟ್ಟ ೨೦೦ ಜನರನ್ನು ಬಿಡುಗಡೆ ಮಾಡಿದರು. ೧೯೪೨ ರಿಂದ ವಸೂಲಾದ ಸಾಮುದಾಯಿಕ ದಂಡದ ಹಣವನ್ನು ತಿರುಗಿ ಕೊಡುವ ಹುಕುಮು ಹೊರಟಿದ್ದು ಪುಂಡಗಂದಾಯ ತಿರುಗಿ ಕೊಡುವ ಹುಕುಮೂ ಹೊರಟಿದೆ.

## ಹೊಸದಿಲ್ಲಿ

ರಜೆ ಮತ್ತು ದುಡಿತದ ವೇಳೆಗಳನ್ನು ಮಾತ್ರ ನಿರ್ಧರಿಸುವ ಬಗ್ಗೆ ಮಧ್ಯಸ್ಥಗಾರರನ್ನು ನೇಮಿಸಲಾಗ ಐದೆಂದು ಸರಕಾರದವರು ತಿಳಿಸಿದ್ದಾರೆ. ಯುದ್ಧೋತ್ತರ ಸ್ಕೇಲ ಮತ್ತು ಭತ್ತೆ ಪ್ರಶ್ನೆಯನ್ನು ವಿಚಾರಿಸಲು ಒಂದು ಮಂಡಳವನ್ನು ನಿಯಮಿಸುವದು. ಜನರಲ್ ಕೌನ್ಸಿಲ್ಲಿನವರು ಇಂದಿನ ಪರಿಸ್ಥಿತಿಯನ್ನು ಚರ್ಚಿಸುವವರೆಗೆ ಮುಷ್ಕರ ಬ್ಯಾಲೆಟನ್ನು ಉಳಿದೂ ಹಾಜರಾಗಿ ಅ. ಭಾ. ರೇಲ್ವೆ ಕೆಲಸಗಾರರ ಮಂಡಳದ ಗುರುಸ್ವಾಮಿಯವರು ಪ್ರಕಟನೆ ಹೊರಡಿಸಿದ್ದಾರೆ.

ಶನಿವಾರ ರಾತ್ರಿ ೧೫ ದರೋಡೆಗಾರರು ಮಾಲಿನದಿಂದ ೪೦ ಮೈಲು ದೂರದಲ್ಲಿ ಸರಕಾರಿ ನಾವೆಯ ಮೇಲೆ ತೋಫುಗಳಿಂದ ಗುಂಡು ಹಾರಿಸಿದ್ದರ ಪರಿಣಾಮವಾಗಿ ೩ ಜನ ಸತ್ತಿದ್ದು ೧೧ ಜನರಿಗೆ ಗಾಯಗಳಾಗಿವೆ. ಸೈನಿಕರು ಮರಳಿ ಗುಂಡು ಹಾರಿಸಿ ಹಲವರು ದರೋಡೆಗಾರರನ್ನು ಕೊಂದರು. ನಾವೆಯು ಸೀನದಿಂದ ರಂಗೂನಕ್ಕೆ ಹಿಂದೀ ಸೈನಿಕರನ್ನೂ ಪ್ರವಾಸಿಕರನ್ನೂ ತೆಗೆದುಕೊಂಡು ಹೊರಟಿತ್ತು.

ಮಂತ್ರಿತ್ರಯರೊಡನೆ ಈಗ ನಡೆದ ಮಾತುಕತೆ ಅಯಶಸ್ವಿಯಾದರೆ ಮತ್ತೊಂದು ಹೋರಾಟ ಅನಿವಾರ್ಯ ಈ ಸಲ ಸಂಪೂರ್ಣ ಸನ್ನಾಹ ಮಾಡಿಕೊಂಡು ಹೋರಾಟ ಹೂಡಲಾಗುವದು ಎಂದು ಜಯಪ್ರಕಾಶ ನಾರಾಯಣರು ನುಡಿದರು.

ಕಾಂಗ್ರೆಸ್ ಸೋಶಾಲಿಸ್ಟ ಪಕ್ಷವು ಕಾಂಗ್ರೆಸ್ಸಿನ ಅಂಗವಾಗಿದ್ದು ಸದ್ಯದ ರಾಜಕೀಯ ಪರಿಸ್ಥಿತಿಯ ಸಿಂಹಾವಲೋಕನ ಮಾಡಿ ಹಿಂದುಗಡೆ ಕಾರ್ಯಕ್ರಮ ನಿರ್ಧರಿಸಲಾಗುವದೆಂದು ಜಯಪ್ರಕಾಶರು ಅಭಿಪ್ರಾಯ ಪಟ್ಟರು. ಕಮ್ಯುನಿಸ್ಟರು ರಶಿಯನ್ ಪಂಚಮದ್ರೋಹಿಗಳೆಂದು ಅವರು ಕರೆದು ಯಾವ ಕಾಲಕ್ಕೆ ಯಾವದೇ ಧೋರಣ ಅನುಸರಿಸಿದರೂ ಅವರು ದೇಶಕ್ಕೆ ಗಂಡಾಂತರ ಸ್ವರೂಪದವರಾಗಿರುವರೆಂದು ನುಡಿದರು.

ಕೇಂದ್ರ ಸರಕಾರದ ಯೋಜನಾಖಾತೆಯ ಸೆಕ್ರೆಟರಿಗಳಾದ ಸರ್ ಟಾಮಸ್ ಹಟನ್‌ರು ಸೇವಾನಿವೃತ್ತಿಪೂರ್ವ ರಜೆ ತೆಗೆದುಕೊಳ್ಳುವವರಿದ್ದು ಅವರ ಸ್ಥಳದಲ್ಲಿ ಈಗ ಜಾಯಿಂಟ ಸೆಕ್ರೆಟರಿಗಳಾಗಿರುವ ಶ್ರೀ ಎಚ್. ವಿ. ಆರ್ ಅಯ್ಯಂಗಾರ್ಯರು ಕಾರ್ಯದರ್ಶಿಗಳಾಗುವ ಸಂಭವವಿದೆ.

ಸದ್ಯದ ದಿಲ್ಲಿ ಪ್ರಾಂತ ಪಂಜಾಬದ ಅಂಬಾಲಾ ಭಾಗ, ಸಂಯುಕ್ತ ಪ್ರಾಂತದ ಆಗ್ರಾ ಹಾಗು ಮಿರತ ಭಾಗದ ರೋಹಿಲಖಂಡದಲ್ಲಿ ಬಿನೌರ ಬಿಸನೂರ ಮುರಾದಾಬಾದ ಭಾಗಗಳನ್ನು ಹೊಸ ಪ್ರಾಂತದಲ್ಲಿ ಕೂಡಬಯಸುವ ಸಂಯುಕ್ತ ಪ್ರಾಂತ ಪಂಜಾಬ ರಜಪುತಾನ ಇನ್ನಿತರ ಭಾಗಗಳನ್ನು ಕೂಡಿಸಿ ದಿಲ್ಲಿ ಪ್ರಾಂತ ಮಾಡಬೇಕೆಂದು ಅಸಫಅಲ್ಲಿ ಮೊದಲಾದವರು ಕೇಳುತ್ತಾರೆ.

ರಾಷ್ಟ್ರೀಯ ಸಪ್ತಾಹದ ಕೊನೆಯ ದಿನದ ನಿಮಿತ್ತ ದಿಲ್ಲಿ ಕಸಗೂಡಿಸುವವರ ವಸಾಹತದಲ್ಲಿ ೧ ಗಂಟೆ ಸೂತ್ರಯಜ್ಞ ನಡೆಯಿತು. ಅನೇಕ ಸ್ತ್ರೀಯರನ್ನೊಳಗೊಂಡು ೫೦೦ ಜನ ಕಾಂಗ್ರೆಸ್ ಕಾರ್ಯಕರ್ತರು ಇದರಲ್ಲಿ ಭಾಗವಹಿಸಿದ್ದರು. ಮಹಾತ್ಮಾ ಗಾಂಧಿ ಡಾ. ರಾಜೇಂದ್ರಪ್ರಸಾದ, ಡಾ ಪಿ. ಸಿ. ಘೋಷ, ಶಂಕರರಾವ ದೇವ, ರಾಜಗೋಪಾಳಾಚಾರಿ, ರಾಜಕುಮಾರಿ ಅಮೃತಕುವರ ಮೊದಲಾದವರು ಸೂತ್ರಯಜ್ಞದಲ್ಲಿ ಪ್ರಮುಖರಾಗಿದ್ದರು. ಮಹಾತ್ಮರು ಅಂದು ಉಪೋಷಣ ಮಾಡಿದರು

## ಸಂಯುಕ್ತಪ್ರಾಂತ

ಕಾಂಗ್ರೆಸ ಸೋಶಾಲಿಸ್ಟ ಮೋಹನಲಾಲ ಗೌತಮರು ರಾಷ್ಟ್ರೀಯ ಸಪ್ತಾಹದ ಕೊನೆಯ ದಿನ ಭಾಷಣ ಮಾಡುತ್ತ ಅಗಸ್ಟಚಳವಳಿಯಲ್ಲಿ ಪೋಲೀಸರೂ ಮಿಲಿಟರಿಯವರೂ ಮಾಡಿದ ಅತ್ಯಾಚಾರದ ಮುಂದೆ ಜಾಲಿಯನ್‌ವಾಲಾಬಾಗ ದುರಂತವು ಏನೂ ಅಲ್ಲೆಂದು ವಿವರಿಸಿದರು. ಹೀಗಿದ್ದರೂ ಕೆಲ ಪೋಲೀಸರು ಮತ್ತು ಅಧಿಕಾರಿಗಳು ಚಳವಳಿಗಾರರಿಗೆ ಆಶ್ರಯ ಕೊಟ್ಟಿದ್ದಲ್ಲದೆ ತಮ್ಮ ನಿವಾಸಸ್ಥಳದಲ್ಲಿಯೆ ಸಭೆ ಸೇರಿಸಲು ಅವಕಾಶ ಕೊಟ್ಟಿದ್ದರೆಂದು ಮುಂತಾಗಿ ಹೇಳಿದರು.

ಮೂರು ಜನ ಕಚ್ಚಾ ಕೈದಿಗಳನ್ನು ದಾರಿಯುದ್ದಕ್ಕೂ ಎಳೆದುಕೊಂಡು ಹೋದರೆಂಬ ಆರೋಪದ ಮೇಲೆ ವಿಚಾರಣೆಗೆ ಗುರಿಯಾಗಿದ್ದ ಟೇಸ ಡೇಲ ಎಂಬವರು ನಿರ್ದೋಷಿಗಳೆಂದು ಬಿಡುಗಡೆ ಹೊಂದಿದ್ದು ಈ ತೀರ್ಪಿನ ವಿರುದ್ಧ ಸರಕಾರದವರು ಅಪೀಲ ಮಾಡಲಿರುವರು.

## ಸಿಂಧ ಪಂಜಾಬ

ಹಿದಾಯತುಲ್ಲಾ ಮಂತ್ರಿಮಂಡಳದಲ್ಲಿ ಸರ್ ಗುಲಾಮಹುಸೇನ ಹಿದಾಯತುಲ್ಲಾ ಹಣಕಾಸು, ಯುದ್ಧೋತ್ತರ ಯೋಜನೆ, ಖಾ. ಬ. ಖುರ್ರೊ ಲೋಕೋಪಯೋಗಿ ಖಾತೆ, ಪೀರ ಇಲಾಹಿಬಕ್ಷ ಅಬಕಾರಿ, ಅರಣ್ಯ ಹಾಗು ಗ್ರಾಮೋದ್ಧಾರಖಾತೆ, ಮೀರಗುಲಾಮ ಅಲ್ಲಿಖಾನ ತಾಲಪುರ, ಕಾಯದೆ ಸುವ್ಯವಸ್ಥೆ ಪೂರೈಕೆ, ಮೀರಜಾದಾ ಅಬ್ದುಲ ಸತ್ತಾರ ಶಿಕ್ಷಣ ಆರೋಗ್ಯ ಮತ್ತು ಮಿ. ಟಿಬುಂದೇ ಅಲ್ಲಿಖಾನರಿಗೆ ಒಕ್ಕಲತನ ಉದ್ಯೋಗ ಮೀನಗಾರಿಕೆ ಸಹಕಾರ ಮತ್ತು ಸುದ್ದಿ ಖಾತೆಗಳನ್ನು ಹಂಚಲಾಗಿದೆ.

## ಹಿಂದುಸ್ತಾನ ಸ್ವತಂತ್ರ ಮತ್ತು ಅಖಂಡವುಳಿಯಬೇಕು

(ಮೊದಲನೇ ಪುಟದಿಂದ ಮುಂದರಿದುದು)

ಜರ್ಮನರು ಮಾತ್ರ ಎಂದು ಹಿಟ್ಲರನು ಜರ್ಮನ್‌ರಿಗೆ ಹೇಳಿದನು. ರಾಷ್ಟ್ರೀಯತ್ವದಿಂದ ವರ್ಣದ್ವೇಷವಾಯವಾಗಬಹುದೆಂದೂ ಜನಾಂಗದ್ವೇಷ ಹಬ್ಬಬಹುದೆಂದೂ ಎಣಿಸಿದರು. ಜಿನ್ನಾರವರ ಧಾರ್ಮಿಕ ಜನಾಂಗತ್ವವು ಅಷ್ಟೇ ಗಂಡಾಂತರದ್ದಿದೆ. 'ನಿಮ್ಮ ಹಮೀನದಾರರ ಪಾಪಗಳನ್ನು ಮರೆತು ಹಿಂದೂ ನೆರೆಹೊರೆಯವರನ್ನು ದ್ವೇಷಿಸಿರೆಂದು' ಜಿನ್ನಾರವರು ಮುಸಲ್ಮಾನ ಒಕ್ಕಲಿಗರಿಗೆ ಹೇಳುತ್ತಿರುವರು.

### ಅಖಂಡ ಹಿಂದುಸ್ತಾನವೆ ಜಾಗತಿಕ ಶಾಂತಿಗೆ ಅವಶ್ಯ

ಹಿಂದುಸ್ತಾನವನ್ನು ಇಬ್ಭಾಗಿಸಿದರೆ ಜಗತ್ತಿನಲ್ಲಿ ನೂರಾರು ಸಮಸ್ಯೆಗಳು ಉದ್ಭವಿಸುವವು ಹಿಂದುಸ್ತಾನ ಒಡೆಯುವದರಿಂದ ಅದರ ಬಲಗುಂದುವದು. ಪ್ರಬಲ ರಾಷ್ಟ್ರಗಳ ಹೊಡೆದಾಟಕ್ಕೆ ರಂಗಸ್ಥಳವಾಗುವದು. ಯುರೋಪ, ಚೀನಗಳಂತೆ ಯುದ್ಧಭೂಮಿಯಾಗುವದು. ಬ್ರಿಟಿಶರು ಭಾರತೀಯರು ಇದಕ್ಕೆ ಒಪ್ಪಲಾರರು. ಭೇದವಿದ್ದವರೊಡನೆ ಕೂಡಿಕೊಂಡಿರುವದೆ ನಾಗರಿಕತೆಯ ತಳಹದಿ. ಜನಾಂಗಿಕ, ಧಾರ್ಮಿಕ, ಸಾಮಾಜಿಕ ಅಸಹಿಷ್ಣುತೆಗಳು ಅನಾಗರಿಕವಿದ್ದು ಪ್ರಜಾಪ್ರಭುತ್ವಕ್ಕೆ ವಿರೋಧವಾಗಿವೆ. ಹಿಂದುಸ್ತಾನದ್ದು ಪ್ರಾಚೀನ ಸಂಸ್ಕೃತಿ. ಈ ಪರಿಸ್ಥಿತಿಯಲ್ಲಿ ಹಿಂದುಸ್ತಾನ ಅಖಂಡವುಳಿದು ಸ್ವತಂತ್ರವಾಗುವದರಲ್ಲಿಯೇ ಅದರ ಮತ್ತು ಜಗತ್ತಿನ ಹಿತವಿರುವದು.

ಇವೆಲ್ಲ ನಿಶ್ಚಿತವಿದ್ದರೂ ಬ್ಯಾ. ಜಿನ್ನಾ ಮತ್ತು ಲೀಗಿನವರು ದ್ವಿರಾಷ್ಟ್ರದ ಘಾತಕ ಧೋರಣ ವಹಿಸಿ ಹಿಂದೀ ಸ್ವಾತಂತ್ರ್ಯಕ್ಕೆ ಅಡ್ಡಗಾಲು ಹೊಡೆಯುತ್ತಿರುವರು. ಹೀಗಿದ್ದರೂ ಬ್ರಿಟಿಶ ಸರಕಾರದವರು ಹಿಂದೀ ಸಮಸ್ಯೆ ಬಿಡಿಸಲು ಸಿದ್ಧರಾಗಿರುವರು. ಲೀಗಿನವರು ತಮ್ಮ ತಪ್ಪನ್ನು ತಿಳಿದುಕೊಂಡು ಹಿಂದೀ ರಾಷ್ಟ್ರದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲುಗಾರರಾದ ಶ್ರೇಯಸ್ಸನ್ನು ಪಡೆಯಬೇಕು. ಅದಕ್ಕೆ ಸಿದ್ಧರಾಗದಿದ್ದರೆ ಅವರನ್ನು ಹಿಂದಕ್ಕೆ ಸರಿಸಿಯಾದರೂ ಬ್ರಿಟಿಶ್ ಸರಕಾರದವರು ಹಿಂದುಸ್ತಾನಕ್ಕೆ ಸ್ವಾತಂತ್ರ್ಯ ಕೊಟ್ಟು ಹಿಂದುಸ್ತಾನದಲ್ಲಿ ಶಾಂತಿಯನ್ನು ಪ್ರಸ್ಥಾಪಿಸುವುದಲ್ಲದೆ ಜಗತ್ತಿನ ಶಾಂತಿಗೂ ಸಹಾಯಕರಾಗಬೇಕೆಂದು ಆಶಿಸುತ್ತೇನೆ.

## ಸಂಸ್ಥಾನ ಪ್ರಜೆಗಳಿಗೆ ಪ್ರಾತಿನಿಧ್ಯ ಬೇಕು

### ಪಂಡಿತ ಜವಾಹರರ ಸೂಚನೆ

ಭಾವೀ ರಾಜ್ಯಘಟನೆಯನ್ನು ಸಿದ್ಧಪಡಿಸುವದಕ್ಕಾಗಿ ನೇಮಿಸಲ್ಪಡಲಿರುವ ಘಟನಾಸಮಿತಿಯಲ್ಲಿ ಸಂಸ್ಥಾನಗಳಿಗೆ ಯೋಗ್ಯ ಪ್ರಾತಿನಿಧ್ಯ ಸಿಕ್ಕಬೇಕು. ಆ ಬಗೆಯ ಪ್ರಾತಿನಿಧ್ಯ ಸಿಕ್ಕದಿದ್ದರೆ ಸಂಸ್ಥಾನ ಪ್ರಜೆಗಳಿಗೆ ಅದೆಂದಿಗೂ ಮೆಚ್ಚಿಗೆಯಾಗದು. ಇಷ್ಟೇ ಅಲ್ಲದೆ ಆ ಬಗ್ಗೆ ತೊಂದರೆ ಉಂಟುಮಾಡುವದು ಖಂಡಿತ ಎಂದು ಅಖಿಲ ಭಾರತ ಸಂಸ್ಥಾನ ಪ್ರಜಾಪರಿಷತ್ತಿನ ಅಧ್ಯಕ್ಷರಾದ ಪಂಡಿತ ಜವಾಹರಲಾಲ ನೆಹರು ಇವರು ದಿಲ್ಲಿಯಲ್ಲಿ ಪತ್ರಿಕಾ ಪರಿಷತ್ತಿನಲ್ಲಿ ಹೇಳಿದರು. ಬ್ರಿಟಿಶ ಮಂತ್ರಿತ್ರಯರು ಈ ವರೆಗೆ ಸಂಸ್ಥಾನ ಪ್ರಜಾಪ್ರಮುಖರ ಭೆಟ್ಟಿ ತೆಗೆದುಕೊಳ್ಳದಿದ್ದುದು ವಿಷಾದಾಸ್ಪದವಾಗಿದೆ. ಜನರ ಅಭಿಪ್ರಾಯ ಈಗ ಏನಿರುವದೆಂಬುದು ಅವರಿಗೆ ಚೆನ್ನಾಗಿ ಗೊತ್ತಿರಲು ಸಾಕು. ಆದರೂ ಅವರು ಸಂಸ್ಥಾನಗಳಲ್ಲಿರುವ ಜನರನ್ನು ಈ ರೀತಿ ಅಲಕ್ಷಿಸದ್ದು ವಿಚಿತ್ರವಾಗಿದೆ ಕಾಯದೆ ದೃಷ್ಟಿಯಿಂದ ಬ್ರಿಟಿಶ್ ಸರಕಾರ ಸಂಸ್ಥಾನಿಕರಿಗಷ್ಟೆ ಸಂಬಂಧಿಸಿದ್ದರೂ ಸರಕಾರದ ... ರಚನೆ ಬದಲಾಗುವಾಗ ಸಂಸ್ಥಾನ ಪ್ರಜೆಗಳ ಅಭಿಪ್ರಾಯ ತಿಳಿದುಕೊಳ್ಳಬೇಕಾದದು ಮಹತ್ವದ್ದು ಹಾಗು ಅವಶ್ಯಕವಿರುವದಲ್ಲದೆ ಅವರ ಅಭಿಪ್ರಾಯಕ್ಕೆ ಹೆಚ್ಚು ಮಹತ್ವ ಇರುವದು. ಇಲ್ಲದೆ ಹೋದರೆ ಸಂಸ್ಥಾನಗಳಲ್ಲಿ ಶಾಂತತೆ ನೆಲಸದು ಎಂದೂ ಅವರು ಹೇಳಿದರು.

ಹಿಂದೀ ಸಂಯುಕ್ತ ಘಟನೆಯಲ್ಲಿ ೧೫ ಅಥವಾ ೧೬ ಸಂಸ್ಥಾನಗಳ ಘಟಕಗಳಾಗಿ ಸೇರಬಹುದಾಗಿ ನನಗನಿಸುವದು. ಉಳಿದವುಗಳ ಘಟಕಗಳಾಗಲು ದೊಡ್ಡವಿಲ್ಲದ್ದರಿಂದ ಅವನ್ನು ಬ್ರಿಟಿಶ ಹಿಂದೀ ಪ್ರಾಂತಗಳಲ್ಲಿ ಸಮಾವೇಶ ಮಾಡಿಕೊಳ್ಳಬೇಕು. ಅಥವಾ ಇವು ಗುಂಪು ಮಾಡಿಕೊಂಡು ಸಂಯುಕ್ತ ಘಟನೆಯ ಘಟಕವಾಗಿ ಪರಿಣಮಿಸಬೇಕು. ಈ ಘಟಕಗಳಿಗೂ ಉಳಿದ ಘಟಕಗಳಂತೆ ದರ್ಜೆ ಪ್ರಾಪ್ತವಾಗುವದು ಮತ್ತು ಸದ್ಯದ ಸ್ವರೂಪದಿಂದ ಹಿಂದೀ ಸಂಸ್ಥಾನ ಪದ್ಧತಿ ಸಂಪೂರ್ಣ ಇಲ್ಲದಂತಾಗುವದು. ಸಂಸ್ಥಾನಿಕರೊಡನೆ ನಮ್ಮದೇನು ಶಿಕ್ಕಾಟವಿಲ್ಲ. ದೊಡ್ಡ ಸಂಸ್ಥಾನಗಳ ಅಧಿಪತಿಗಳು ಘಟನಾತ್ಮಕ ವರಿಷ್ಠರಾಗಿ ಉಳಿಯಬಹುದು ಆದರೆ ಅದನ್ನು ನಿರ್ಣಯಿಸುವದು ಅವರ ಪ್ರಜೆಗಳನ್ನೆ ಕೂಡಿದೆ. ಸಣ್ಣ ಸಂಸ್ಥಾನಗಳ ಅಧಿಪತಿಗಳು ಮಾತ್ರ ಘಟನಾತ್ಮಕ ವರಿಷ್ಠರಾಗಿ ಉಳಿಯಲಾರರು. ಅವರಿಗೆ ಪಿಂಚಣಿ ಕೊಡಲಾಗುವದು.

ಸಂಸ್ಥಾನಿಕರು ಮೊದಲಿಗಿಂತ ಈಗ ಪ್ರಗತಿಪರ ಧೋರಣ ವಹಿಸಿದಂತೆ ತೋರುತ್ತದೆ. ಅವರು ಹಿಂದುಸ್ತಾನದ ಸ್ವಾತಂತ್ರ್ಯ ಬೇಡಿಕೆಗೆ ಸಂಪೂರ್ಣ ಬೆಂಬಲ ಕೊಟ್ಟಿದ್ದಲ್ಲದೆ ಸಂಸ್ಥಾನಗಳನ್ನೊಳಗೊಂಡು ಹಿಂದುಸ್ತಾನದಿಂದ ಬ್ರಿಟಶ್‌ರು ಹೊಂಟೆದ್ದು ಹೋಗಬೇಕೆಂದು ಹೇಳುತ್ತಿರುವರು. ಹಿಂದುಸ್ತಾನದ ಅಖಂಡತ್ವಕ್ಕೂ ಅವರು ಬೆಂಬಲ ಕೊಟ್ಟಿರುವರು. ಇದಲ್ಲ ಸಮಾಧಾನಕರವಾಗಿದ್ದರೂ ಸಂಸ್ಥಾನ ಪ್ರಜೆಗಳಿಗೆ ಸಂಸ್ಥಾನದ ಅಂತರಿಕ ವ್ಯವಸ್ಥೆ ಅಭಿವೃದ್ಧಿ ಹೊಂದುವದು ಬೇಕಾಗಿದೆ. ಇತ್ತ ಸಂಸ್ಥಾನಿಕರು ಗಮನಿಸಬೇಕಾಗಿದೆಂದು ಮುಂತಾಗಿ ಜವಾಹರರು ಹೇಳಿದರು.

## ಪ್ರಾಥಮಿಕ ಶಿಕ್ಷಕರ ಸಂಪು ಹಿಂತೆಗದುಕೊಂಡರು

### ೨೪ ರಿಂದ ಸಾಲೆ ಸುರುವಾಗುವವು

ಕಳೆದ ಅಯಿದು ವಾರಗಳಿಂದ ಮುಂಬಯಿ ಪ್ರಾಂತದಲ್ಲಿಯ ಪ್ರಾಥಮಿಕ ಶಿಕ್ಷಕರು ಸಂಪು ಹೂಡಿದ್ದರಷ್ಟೆ. ಈ ಸಂಬಂಧದಲ್ಲಿ ಶಿಕ್ಷಕ ಸಂಘದ ಅಧ್ವರ್ಯುಗಳು ಮಾನ್ಯ ಮುಖ್ಯ ಮಂತ್ರಿ ಖೇರರನ್ನು ಕಂಡು ತಮ್ಮ ಬೇಡಿಕೆಗಳನ್ನು ನಿವೇದಿಸಿದರು. ಸಂಪನ್ನು ಹಿಂತೆಗೆದುಕೊಳ್ಳಿರಿ ನಿಮ್ಮ ಬೇಡಿಕೆಗಳನ್ನೆಲ್ಲ ಸಹಾನುಭೂತಿಪೂರ್ವಕ ವಿಚಾರಿಸಲಾಗುವದೆಂದು ಮಂತ್ರಿವರ್ಯರು ಆಶ್ವಾಸಿಸಿದರು ಅವರ ಆಶ್ವಾಸನಕ್ಕೆ ಮನ್ನಣೆ ಕೊಟ್ಟು ಶಿಕ್ಷಕ ಸಂಘದವರು ಸಂಪು ಹಿಂತೆಗೆದುಕೊಂಡಿದ್ದಾರೆ ಬರುವ ೨೪ ನೇ ತಾರೀಖಿನಿಂದ ಸಾಲೆಗಳು ಮತ್ತೆ ಪ್ರಾರಂಭವಾಗುವವು.

## ಧಾನ್ಯ ಸಕಾಲಕ್ಕೆ ಬರದಿದ್ದರೆ ಪರಿಸ್ಥಿತಿ ಭೀಕರವಾಗುವದು

### ಆಹಾರ ಮಂತ್ರಿ ಜ್ವಾಲಾಪ್ರಸಾದರ ಅಭಿಪ್ರಾಯ

“ಸೀದಾ ಕ್ಷೇತ್ರಗಳಲ್ಲಿ ಕಾಳಿನ ಸಂಗ್ರಹ ಬಹಳ ಕಡಿಮೆಯಿದೆ. ಗೋದಿ ಸೀದಾ ಪ್ರಮಾಣವನ್ನು ೧೨ ಔಂಸಿಗಿಳಿಸಿರದಿದ್ದರೆ ಅಯಾ ಭಾಗಗಳಲ್ಲಿ ಗೋದಿ ಸಿಕ್ಕದಂತಾಗುತ್ತಿತ್ತು. ಗೋದಿ ಬೆಳೆವ ಭಾಗದಲ್ಲಿಯೂ ಸೀದಾ ಪ್ರಮಾಣ ಇಳಿಸಲಾಗಿದೆ” ಎಂದು ಹಿಂದುಸ್ತಾನ ಸರಕಾರದ ಆಹಾರ ಖಾತೆಯ ಮಂತ್ರಿಗಳಾದ ಸರ್ ಜ್ವಾಲಾಪ್ರಸಾದ ಶ್ರೀ ವಾಸ್ತವರು ಅಭಿಪ್ರಾಯ ಪಟ್ಟರು. ಫೆಬ್ರುವರಿ ಮತ್ತು ಮಾರ್ಚ ತಿಂಗಳುಗಳಲ್ಲಿ ಪಂಜಾಬದಲ್ಲಾದ ಮಳೆಯಿಂದ ಹಿಂದುಸ್ತಾನಕ್ಕೆ ಸಹಾಯದ ಅವಶ್ಯಕತೆ ಕಡಿಮೆಯಾಗಿದೆಂದು ಅಮೇರಿಕೆಯ ಒಕ್ಕಲತನ ಮಂತ್ರಿಗಳು ಹೇಳಿದ್ದು ಸರಿಯಾಗಿರುವದಿಲ್ಲ ಜರ್ಮನಿ ಇಲ್ಲವೆ ಫ್ರಾನ್ಸದಲ್ಲಿ ಕಾಳುಗಳು ಸಿಕ್ಕದಿದ್ದರೆ ಯಾರೂ ಸಾಯುವದಿಲ್ಲ. ಆದರೆ ಹಿಂದುಸ್ತಾನದಲ್ಲಿ ಜನರಿಗೆ ಕಾಳು ಸಿಕ್ಕದಿದ್ದರೆ ಅವರು ಸಾಯುವರು. ಹಿಂದುಸ್ತಾನದಲ್ಲಿ ೧೦೦ ಕ್ಕೆ ೯೦ ರಷ್ಟು ಜನ ಧಾನ್ಯದಿಂದಲೆ ಹೊಟ್ಟೆತುಂಬಿಕೊಳ್ಳುತ್ತಿರುವರು. ಈ ವರ್ಷ ೪೦ ಲಕ್ಷ ಟನ್ ಅಕ್ಕಿ ಬೇಕೆಂದು ಒಂದೇ ಸವನೆ ಕೇಳಿಕೊಂಡದ್ದಕ್ಕೆ ಕಳೆದ ಮಾರ್ಚದಲ್ಲಿ ೧೪ ಲಕ್ಷ ಟನ್ ಅಕ್ಕಿಯ ವಚನ ಸಿಕ್ಕಿತು. ಅದರಲ್ಲಿ ೨೫ ಲಕ್ಷ ಟನ್ ಜೂನದಲ್ಲಿ ಸಿಕ್ಕಬೇಕೆಂದು ಕೇಳಿಕೊಳ್ಳಲಾಗಿತ್ತು. ಆ ಪರಿಸ್ಥಿತಿಯನ್ನೂ ಬದಲಾಗಿಲ್ಲ. ಯಾವ ಘಟನೆಗಳೂ ಸಂಭವಿಸಿಲ್ಲ ಫೆಬ್ರುಅರಿ ಮಾರ್ಚದಲ್ಲಿ ಮಳೆಯಾಗಿದೆಂದು ಹೇಳಿ ಬೇಡಿಕೆಯನ್ನು ಇನ್ನೂ ಕಡಿಮೆ ಮಾಡುವದು ಯಾವ ರೀತಿಯಿಂದಲೂ ನ್ಯಾಯ್ಯವಾಗಲಾರದು.

ಪಂಜಾಬದಲ್ಲಿ ಮೊದಲು ಸಿಕ್ಕುತ್ತಿದ್ದ ೧೬ ಔಂಸ ಗೋದಿಯ ಪ್ರಮಾಣ ೬ ಔಂಸಕ್ಕಿಳಿಸಿ ಉಳಿದ ೬ ಔಂಸ ಅಕ್ಕಿ ಕೊಡಹತ್ತಿದ್ದಾದೆ. ದಿಲ್ಲಿಯಲ್ಲಿಯ ಗೋದಿ ಸೀದಾವನ್ನು ಹೀಗೆಯೆ ಕಡಿಮೆ ಮಾಡಿದೆ ಸಂಯುಕ್ತಪ್ರಾಂತದಲ್ಲಿ ಕೇವಲ ೪ ಔಂಸ ಗೋದಿ ಕೊಡಲಾಗುತ್ತದೆ. ಸದ್ಯಕ್ಕೇನೋ ಈ ಭಾಗದಲ್ಲಿ ಅಕ್ಕಿಯ ಉಳಿಕೆಯಿದೆ. ಈ ರೀತಿ ಅಕ್ಕಿ ಹೆಚ್ಚು ಸುರಿಸಲ್ಪಟ್ಟರೆ ದಕ್ಷಿಣ ಭಾಗದ ಕೊರತೆಯ ಪ್ರದೇಶಗಳಿಗೆ ಅಕ್ಕಿ ಉಳಿಯದಂತಾಗುವದು. ಈ ಮುಂತಾದ ಯೋಜನೆಗಳಿಂದ ಎಪ್ರಿಲ ಮೇ ವರೆಗೆ ಹೇಗಾದರೂ ಸಾಗಬಹುದು. ಆದರೆ ಅಷ್ಟರಲ್ಲಿ ಧಾನ್ಯ ಬರದಿದ್ದರೆ ಮಾತ್ರ ಪರಿಸ್ಥಿತಿ ಭೀಕರವಾಗುವದು ಎಂದು ಮುಂತಾಗಿ ಶ್ರೀ ವಾಸ್ತವರು ಅಭಿಪ್ರಾಯ ಪಟ್ಟಿರುವರು.

## ತಾಡಪತ್ರಿ ರಾಘವಾಚಾರ್ಯರ ಶೋಚನೀಯ ನಿಧನ

ಬಳ್ಳಾರಿಯ ಸುಪ್ರಸಿದ್ಧ ನಾಟಕ ಶಿರೋಮಣಿ ಶ್ರೀ ತಾಡಪತ್ರಿ ರಾಘವಾಚಾರ್ಯರು ೧೬ ನೇ ತಾರೀಕು ರಾತ್ರಿ ೧೧ ಗಂಟೆಗೆ ಸ್ವಗೃಹದಲ್ಲಿ ಸ್ವರ್ಗಸ್ಥರಾದರು. ಮರಣ ಸಮಯಕ್ಕೆ ಅವರ ವಯಸ್ಸು ೬೪ ವರ್ಷವಾಗಿತ್ತು ಅವರಿಗೆ ಮಧುಮೇಹದ ಹುಣ್ಣಾಗಿ ಅದರಿಂದಲೆ ದಿವಂಗತರಾದರು. ರಾಘವಾಚಾರ್ಯರು ಕನ್ನಡ, ಇಂಗ್ಲಿಷ, ತೆಲಗು ಭಾಷೆಗಳಲ್ಲಿ ಒಳ್ಳೆ ವಾಗ್ಮಿಗಳೂ ಕರ್ನಾಟಕ ಆಂಧ್ರ ನಾಟಕ ರಂಗದಲ್ಲಿ ಕಳೆದ ೫೦ ವರ್ಷಗಳಿಂದಲೂ ಪ್ರಸಿದ್ಧಿ ಹೊಂದಿದವರು. ಪ್ರಸಿದ್ಧ ನಟರು ಕವೀಂದ್ರ ರವೀಂದ್ರರ ಪ್ರಶಂಸೆಗೂ ಪಾತ್ರರಾಗಿದ್ದರು. ದೀನಬಂಧು ಕಬೀರನ ಪಾತ್ರದಿಂದ ಬೆಂಗಳೂರಿನಲ್ಲಿ ಮಹಾತ್ಮಾ ಗಾಂಧಿಯವರ ಮೆಚ್ಚುಗೆಗೂ ಪಾತ್ರರಾದವರು. ಯುರೋಪಿನಲ್ಲೆಲ್ಲ ಸಂಚರಿಸಿ ಬರ್ನಾರ್ಡ ಶಾ ಮುಂತಾದವರ ಭೆಟ್ಟಿ ತೆಗೆದುಕೊಂಡಿದ್ದರು. ರೈತು ಬಿಡ್ಡ ದ್ರೌಪದೀ ವಸ್ತ್ರಾಹರಣವೆಂಬ ಎರಡು ತೆಲಗು ಚಿತ್ರಪಟಗಳಲ್ಲಿಯೂ ಕೆಲಸ ಮಾಡಿದ್ದರು. ಹರಿಜನಾಭಿವೃದ್ಧಿಗಾಗಿ ವಿಶೇಷ ದುಡಿದರು. ತಮ್ಮ ಗಳಿಕೆಯನ್ನು ವ್ಯಯಮಾಡಿದರು. ದೀನ ಅನಾಥರ ಸಲುವಾಗಿ ವಿಧವೆಯರ ಸಲುವಾಗಿಯೂ ತಮ್ಮ ಹಣವನ್ನು ವೆಚ್ಚ ಮಾಡಿದರು. ಈ ರೀತಿ ಕರ್ನಾಟಕ ಸಾಹಿತ್ಯ ರಂಗಭೂಮಿಯ ಪ್ರಮುಖ ಸೇವಕರಾಗಿದ್ದ ಆಚಾರ್ಯರು ಅಕಾಲದಲ್ಲಿ ಮರಣ ಹೊಂದಿದ್ದು ತುಂಬಬಾರದ ಹಾನಿಯುಂಟಾಗಿದೆ. ಪರಮಾತ್ಮನು ಇವರ ಆತ್ಮಕ್ಕೆ ಶಾಂತಿಯನ್ನೀಯಲಿ.

## ಪಾಕಿಸ್ತಾನಕ್ಕೆ ಶೀಖರ ವಿರೋಧ

### ಸರದಾರ ಸಂತಸಿಂಗರ ಗರ್ಜನೆ

ಬ್ರಿಟಿಶರು ಮುಸಲ್ಮಾನರ ಪಾಕಿಸ್ತಾನ ಯೋಜನೆಯನ್ನು ಮನ್ನಿಸಿದರೆ ಹಿಂದುಸ್ತಾನದಲ್ಲಿ ಯಾದವೀ ಯುದ್ಧವಾಗುವದು. ಸಂಪೂರ್ಣ ಸ್ವಾತಂತ್ರ್ಯಕ್ಕಾಗಿ ಸರ್ವಸ್ವವನ್ನರ್ಪಿಸಬೇಕಾದರೂ ಭಾರತೀಯರು ಅದಕ್ಕೆ ಸಿದ್ಧರಿರುವರು. ಎಂಬುದಾಗಿ ಶೀಖ ಮುಂದಾಳುಗಳೂ ಆಹಾರ ಶಿಷ್ಟಮಂಡಳದ ಸದಸ್ಯರೂ ಆಗಿರುವ ಸರದಾರ ಸಂತಸಿಂಗರು ಲಂಡನದಲ್ಲಿ ಅಭಿಪ್ರಾಯಪಟ್ಟರು. ಈ ಅಂತಃಕಲಹದಿಂದ ಹತ್ತು ಲಕ್ಷ ಜನ ಸಾವಿಗೆ ತುತ್ತಾದರೂ ಸ್ವಾತಂತ್ರ್ಯದಿಂದ ತೂಗಿ ನೋಡಿದರೆ ಅದು ಅತ್ಯಲ್ಪವೆಂದು ಹೇಳದಿರಲಾರೆ. ಹಿಂದೂ ಮುಸಲ್ಮಾನ ಪ್ರಶ್ನೆ ಆಂತರಿಕ ಪ್ರಶ್ನೆ. ಸ್ವಾತಂತ್ರ್ಯಕ್ಕಾಗಿ ಹಿಂದುಗಳು ಮುಸಲ್ಮಾನರ ಗೋಣು ಹಿಚುಕಿದರೆ ಜಗತ್ತು ಅದಕ್ಕೇಕೆ ಬೆರಗಾಗಬೇಕು? ಸ್ವಾತಂತ್ರ್ಯ ರಕ್ಷಣೆಗಾಗಿ ಕ್ರಿಶ್ಚನ್‌ರು ಕ್ರಿಶ್ಚನ್‌ರ ಕೊರಳು ಕೊಯ್ದರು. ಅಮೇರಿಕನ್‌ರು ಅಮೇರಿಕನ್‌ರೊಡನೆ ಹೋರಾಡಬೇಕಾಯಿತು. ಹಿಂದು ಮುಸಲ್ಮಾನ ಸಮಸ್ಯೆ ಎರಡನೆಯವರು ಬಗೆಹರಿಸಬೇಕಿಲ್ಲ. ರಕ್ತಪಾತ ಅನಿವಾರ್ಯವಾದರೆ ಭಾರತೀಯರು ಅದಕ್ಕಾಗಿ ಚಿಂತೆ ಪಡಬೇಕಾಗಿಲ್ಲ.

ಮುಸ್ಲಿಂಲೀಗಿನ ಪ್ರತಿಜ್ಞೆಗಳಿಗೆ ಬ್ರಿಟಿಶ್ ಶಿಷ್ಟ ಮಂಡಳದ ಸದಸ್ಯರು ಅಷ್ಟೊಂದು ಮಹತ್ವ ಕೊಡದಿದ್ದರೆ ಲೇಸು. ಜಿನ್ನಾರವರ ಕನಸನ್ನು ನನಸಾಗಿ ಮಾಡಲು ರಶಿಯಕ್ಕೆ ವಿನಂತಿ ಮಾಡಿಕೊಳ್ಳುವ ಬ್ರಿಟಿಶ್ ಸರಕಾರದ ಮಿತ್ರ ಸರ್ ಫಿರೋಜಖಾನ ನೂನರ ಹುಚ್ಚ ಬೆದರಿಕೆಗಳ ಕಡೆಗೆ ಕೂಡ ಅಷ್ಟು ಮಹತ್ವ ಕೊಡುವುದರಲ್ಲಿ ಅರ್ಥವಿಲ್ಲ. ಜೆಂಗಿಸಖಾನನ ನಾಟಕವನ್ನು ಅಭಿನಯಿಸುತ್ತಿರುವ ನೂನರ ಸಮಾಚಾರ ತೆಗೆದುಕೊಳ್ಳಲು ಪಂಜಾಬದ ಸೀಖರಿಗೆ ಬಿಟ್ಟುಬಿಡಿರಿ.

ಪಾಕಿಸ್ತಾನ ಮನ್ನಿಸಿದರೆ ಈ ಭಾಗ ಪುನಃ ಗೆದ್ದುಕೊಂಡು ಹಿಂದುಸ್ತಾನದ ಐಕ್ಯವನ್ನು ಸ್ಥಾಪಿಸುವ ವರೆಗೆ ಯಾದವೀ ಯುದ್ಧ ನಡೆವುದು. ಹಿಂದುಸ್ತಾನದಲ್ಲಿ ಪಾಕಿಸ್ತಾನ ದೊಡ್ಡ ಹುಣ್ಣು ಇದ್ದಂತೆ. ಅದರಿಂದ ಹಿಂದುಸ್ತಾನಕ್ಕೆ ಬಾಧೆತಪ್ಪದು ಎಂದು ಮುಂತಾಗಿ ಸಂತಸಿಂಗರು ಗರ್ಜಿಸಿದರು.

## ಕಾಂಗ್ರೆಸ್ ಕಾರ್ಯಕಾರಿ ಮಂಡಳ ಮಹತ್ವದ ಚರ್ಚೆ

ಕಾಂಗ್ರೆಸ ಕಾರ್ಯಕಾರಿ ಮಂಡಳದ ಸಭೆ ಇದೇ ೧೨ ನೇ ತಾರೀಖಿನಿಂದ ದಿಲ್ಲಿಯಲ್ಲಿ ಸೇರಿ ಮಹತ್ವದ ಚರ್ಚೆ ನಡಿಸಿದೆ. ಮಂತ್ರಿತ್ರಯರೊಡನೆ ಮೌಲಾನಾ ಅಬುಲ್ ಕಲಂ ಆಝಾದರು ನಡಿಸಿದ ಮಾತುಕತೆಗಳ ಸಂಬಂಧದಲ್ಲಯೇ ಚರ್ಚೆ ನಡೆದಿದೆ. ಮುಸ್ಲಿಂ ಲೀಗದ ಧೋರಣೆ, ಕಾಂಗ್ರೆಸ ಮತ್ತು ಲೀಗಗಳಲ್ಲಿ ಒಡಂಬಡಿಕೆಯಾಗಬೇಕಾದರೆ ಕಾಂಗ್ರೆಸ್ಸು ಎಷ್ಟರ ಮಟ್ಟಿಗೆ ತನ್ನ ಧೋರಣ ಮಾರ್ಪಡಿಸಿಕೊಳ್ಳಬಹುದು ಮೊದಲಾದ್ದನ್ನು ಕೂಲಂಕಷವಾಗಿ ಚರ್ಚಿಸಿದೆ. ಅಲ್ಲದೆ ಬಂಗಾಲದಲ್ಲಿ ಸಮಿಶ್ರ ಮಂತ್ರಿಮಂಡಲ ಸ್ಥಾಪನೆ ಪ್ರಶ್ನೆ, ಮದ್ರಾಸ ಶಾಸನ ಸಭಾ ಕಾಂಗ್ರೆಸ ಪಕ್ಷದ ಧುರೀಣರ ಆಯ್ಕೆ ಮೊದಲಾದ ವಿಷಯಗಳ ಬಗ್ಗೆಯೂ ಚರ್ಚೆ ನಡೆಯಿತೆಂದು ತಿಳಿಯುತ್ತದೆ. ನಾಲ್ಕು ದಿನಗಳ ಚರ್ಚೆಯ ನಂತರ ಕಾಂಗ್ರೆಸ ಧುರೀಣರು ಒಂದು ಅಭಿಪ್ರಾಯಕ್ಕೆ ಬಂದಿರುವರು. ಬಲವಾದ ಕೇಂದ್ರ ಸರಕಾರವುಳ್ಳ ಅಖಂಡ ಭಾರತವಿರಬೇಕೆಂದು ಕಾಂಗ್ರೆಸು ಒತ್ತಾಯ ಮಾಡುವದು. ಆದರೂ ಉಳಿದ ಅಧಿಕಾರಗಳನ್ನೊಳಗೊಂಡು ಶಕ್ಯವಿದ್ದಷ್ಟು ಸ್ವಾಯತ್ತತೆಯನ್ನು ಪ್ರಾಂತಗಳಿಗೆ ಕೊಡಲು ಹಾಗು ಬಹುಸಂಖ್ಯಾಕ ಮುಸಲ್ಮಾನರಿರುವ ಪ್ರದೇಶಗಳಲ್ಲಿ ಅವರದೇ ಸ್ವಾಯತ್ತ ಸರಕಾರಕ್ಕೆ ಆಸ್ಪದ ಸಿಕ್ಕುವಂತೆ ಪ್ರಾಂತಗಳನ್ನು ಪುನರ್ರಚಿಸಲು ಕಾಂಗ್ರೆಸ್ಸು ಒಪ್ಪುವದು. ಹಿಂದುಸ್ತಾನದ ಹೊಸ ರಾಜ್ಯಘಟನೆಯನ್ನು ತಯಾರಿಸಲು ಒಂದೇ ಘಟನಾ ಸಮಿತಿಯಿರಬೇಕೆಂದೂ ಕಾಂಗ್ರೆಸ್ಸು ಪ್ರತಿಪಾದಿಸಿದೆ. ಕಾಂಗ್ರೆಸ್ಸಿನ ಈ ಧೋರಣ ಸಿಚ್ಚಳವಿದ್ದು ಶಕ್ಯವಿದ್ದಷ್ಟು ಹಿಂದೆ ಸರಿಯಲು ಪ್ರಯತ್ನಿಸಲಾಗಿದೆ.

ಈ ರೀತಿ ಸದ್ಯದ ಪರಿಸ್ಥಿತಿಯ ಬಗ್ಗೆ ವಿಚಾರ ಮಾಡಿದ್ದಲ್ಲದೆ ಮಲಯಾಪ್ರವಾಸದಲ್ಲಿ ಪಂಡಿತ ಜವಾಹರಲಾಲರು ಮಾಡಿದ ಕಾರ್ಯವನ್ನು ಪ್ರಶಂಸಿಸಲಾಯಿತು. ಮಲಾಯಾದಲ್ಲಿ ಹಿಂದೀ ಪರಿಹಾರ ಸಮಿತಿ ರಚಿಸಿದ್ದನ್ನೂ ಹಿಂದೀಯರಿಗೆ ಪರಿಹಾರ ಕೊಡಲು ವಿಶ್ವಸ್ತ ನಿಧಿ ಏರ್ಪಡಿಸಿದ್ದನ್ನೂ ಸ್ವಾಗತಿಸಲಾಯಿತು. ಮಲಾಯಾದಲ್ಲಿ ಹಿಂದೀಯರು ಮಲಯನ್‌ರು, ಚೀನರು, ಇಂಡೋನೇಶಿಯನರು ಯುರೋಪಿಯನ್ನರೊಡನೆ ಮತ್ತು ಉಳಿದವರೊಡನೆ ಮಿತ್ರತ್ವ ಹಾಗೂ ಸಹಕಾರದಿಂದ ವರ್ತಿಸುತ್ತಿರುವದಕ್ಕೆ ಸಂತೋಷ ಪ್ರದರ್ಶಿಸಲಾಯಿತು. ರೇಲ್ವೆ ಸಂಪನ್ನು ಯಶಸ್ವಿಯಾಗಿ ಕೊನೆಗಾಣಿಸಿದ್ದಕ್ಕೆ ಜಿ. ಪಿ. ಹತ್ತೀಸಿಂಗರಿಗೆ ವಿಶೇಷ ಧನ್ಯವಾದ ಸಮರ್ಪಿಸಿ ಹಿಂದೀಯರ ಸಂಘಟನೆ ಹಾಗು ಪರಿಹಾರ ಕಾರ್ಯದಲ್ಲಿ ಸಹಕಾರ ವ್ಯಕ್ತಮಾಡಲಾಯಿತು— ಕಾಂಗ್ರೆಸ ಪ್ರತಿನಿಧಿಗಳಿಗೆ ಅಪೂರ್ವ ಸ್ವಾಗತವಿತ್ತದ್ದಕ್ಕಾಗಿ ಸಾರ್ವಜನಿಕರಿಗೂ ಅಧಿಕಾರಿಗಾರರಿಗೂ ಕೃತಜ್ಞತೆ ಸಲ್ಲಿಸಲಾಯಿತು.

## ದಕ್ಷಿಣ ಆಫ್ರಿಕದ ಹಿಂದೀಯರ ಸಮಸ್ಯೆ

### ಸರ್ ರಾಮಸ್ವಾಮಿ ಮುದಲಿಯಾರರ ಹೇಳಿಕೆ

‘ಆಸ್ತಿ ಸಂಪಾದನೆಯ ಹಿಂದೀಯರ ಹಕ್ಕನ್ನು ನಿರ್ಬಂಧಿಸುವ ಮಸೂದೆ ದಕ್ಷಿಣ ಅಫ್ರಿಕೆಯಲ್ಲಿ ಕಾಯಿದೆಯಾಗಿ ಪರಿಣಮಿಸಿದರೆ ಹಿಂದುಸ್ತಾನ ಸರಕಾರವು ಅದನ್ನು ರಾಷ್ಟ್ರಸಂಘದ ಮುಂದಿಡುದ ಉಪಾಯಗಳನ್ನು ಕೈಕೊಳ್ಳುವದು’ ಎಂದು ಸಭೆಯ ಧುರೀಣರಾದ ಸರ್ ರಾಮಸ್ವಾಮಿ ಮುದಲಿಯಾರರು ೧೬ ಕ್ಕೆ ಕೇಂದ್ರ ಶಾಸನ ಸಭೆಯಲ್ಲಿ ಹರ್ಷೋದ್ಗಾರಗಳ ಮಧ್ಯೆ ಸಾರಿದರು.

ಈ ವಿಷಯದ ಬಗ್ಗೆ ಮಾನ್ಯ ಸದಸ್ಯರು ಮತ್ತು ಸರಕಾರದ ನಡುವೆ ಭಿನ್ನಾಭಿಪ್ರಾಯವಿಲ್ಲದ್ದರಿಂದ ಹಿಂದುಸ್ತಾನದ ಮಾನರಕ್ಷಣೆಗೆ ಸಾಧ್ಯವಿದ್ದ ಎಲ್ಲ ಉಪಾಯ ಕೈಕೊಳ್ಳುವದೆಂದು ಈ ಹೇಳಿಕೆಯಿಂದ ಜನರಲ್ಲಿ ನಂಬಿಕೆ ಹುಟ್ಟದಿರದು ಎಂತಲೂ ಅವರು ನುಡಿದಾಗ ಸಭೆಯಲ್ಲಿ ಮತ್ತೊಮ್ಮೆ ಹರ್ಷೋದ್ಗಾರವೆದ್ದಿತು.

ಸರ್ ರಾಮಸ್ವಾಮಿ ಮುದಲಿಯಾರರು ಹೇಳಿದ್ದೇನೆಂದರೆ—

ದಕ್ಷಿಣ ಅಫ್ರಿಕೆಯಲ್ಲಿಯ ಹಿಂದೀಯರು ಕಳೆದ ಎರಡು ವರ್ಷಗಳಿಂದ ಪಡುತ್ತಿದ್ದ ಕಷ್ಟನಷ್ಟಗಳನ್ನು ಕೇಂದ್ರ ಸರಕಾರವು ನಿರೀಕ್ಷಿಸುತ್ತ ಬಂದಿದೆ. ಹಿಂದೀಯರ ಆಸ್ತಿ ಸಂಪಾದನೆಯ ಮೇಲೆ ನಿರ್ಬಂಧ ಹಾಕುವ ಯೂನಿಯನ ಸರಕಾರದ ಇತ್ತೀಚಿನ ಮಸೂದೆಯು ನಮ್ಮ ಸರಕಾರವನ್ನು ದಂಗುಬಡಿಸಿತು. ಈ ಮಸೂದೆಯನ್ನು ಹಿಂತೆಗೆದುಕೊಳ್ಳಲು ಅಫ್ರಿಕನ ಸರಕಾರವನ್ನು ನಾನಾ ರೀತಿ ಒತ್ತಾಯ ಪಡಿಸಲಾಯಿತು. ಭಾರತೀಯರು ಈ ಬಗ್ಗೆ ಎಷ್ಟು ಕುಪಿತರಾಗಿರುವರೆಂಬದನ್ನು ಅವರಿಗೆ ತಿಳಿಸಲಾಯಿತು. ಇಷ್ಟಾದರೂ ಈ ಮಸೂದೆಯನ್ನು ದಕ್ಷಿಣ ಅಫ್ರಿಕದ ಪಾರ್ಲಮೆಂಟದ ಮುಂದೆ ಇಡಲಾಗಿದೆ. ಅದು ಇಷ್ಟರಲ್ಲಿಯೇ ಕಾಯದೆಯಾಗಲಿದೆ. ಇದನ್ನು ನೋಡಿ ನಮ್ಮ ಸರಕಾರಕ್ಕೆ ವಿಷಾದವಾಗಿದೆ. ಇದು ವರೆಗೂ ಕೈಕೊಂಡ ಉಪಾಯಗಳಿಗಿಂತಲೂ ತೀಕ್ಷ್ಣೋಪಾಯಗಳನ್ನು ಕೈಕೊಳ್ಳಬೇಕೆಂಬ ವಿಚಾರ ನಮ್ಮ ಸರಕಾರಕ್ಕೆ ಹೊಳೆಯಿತು. ಈ ಪ್ರಕರಣವನ್ನು ಜಾಗತಿಕ ಸಂಸ್ಥೆಯ ಮುಂದಿಡಬೇಕೆಂದು ಸೂಚನೆಗಳು ಬಂದವು.

ಈ ಮಸೂದೆಯು ದ. ಅಫ್ರಿಕನ ಪಾರ್ಲಿಮೆಂಟನಲ್ಲಿ ಪಾಸಾದರೆ ಇದನ್ನು ಜಾಗತಿಕ ಸಂಸ್ಥೆಯ ಮುಂದಿಡುವ ಉಪಾಯಗಳನ್ನು ಹಿಂದುಸ್ತಾನ ಸರಕಾರವು ಕೈಕೊಳ್ಳುವದು. ಈ ಬಗ್ಗೆ ವಿವರಗಳನ್ನು ಚರ್ಚಿಸುವದು ಈಗ ಅಪ್ರಸ್ತುತ. ಶಾಸನ ಸಭೆ ಹಾಗು ಸರಕಾರಗಳಲ್ಲಿ ಈ ಪ್ರಶ್ನೆಯ ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ಹಿಂದುಸ್ತಾನದ ಮಾನ ರಕ್ಷಣೆಗೆ ಸಾಧ್ಯವಿದ್ದ ಎಲ್ಲ ಉಪಾಯಗಳನ್ನು ನಮ್ಮ ಸರಕಾರವು ಕೈಕೊಳ್ಳುವದೆಂಬ ಈ ಹೇಳಿಕೆಯಿಂದ ಜನರಲ್ಲಿ ನಂಬಿಕೆ ಹುಟ್ಟದಿರದು.

ಚಮನಲಾಲ (ಕಾಂ) ದ. ಅಫ್ರಿಕೆಯಲ್ಲಿರುವ ಹಿಂದೀ ಹೈಕಮೀಶನರರನ್ನು ಹಿಂದೆ ಕರೆಸಲು ಕೇಂದ್ರ ಸರಕಾರವು ನಿರ್ಧರಿಸಿದೆಯೆ ?

ರಾಮಸ್ವಾಮಿ ಮೊದಲಿಯಾರ—ಹೈಕಮೀಶನರರು ಇಷ್ಟರಲ್ಲಿಯೇ ಹಿಂತಿರುಗುವರೆಂದು ನಂಬಿದ್ದೇನೆ.

## ಬೆಂಗಳೂರು---ಮೈಸೂರಲ್ಲಿ

ಮುಂಬರುವ ೫ ವರ್ಷಗಳಲ್ಲಿ ಮೈಸೂರು ಸಂಸ್ಥಾನದ ಆಹಾರೋತ್ಪಾದನೆಯನ್ನು ಹೆಚ್ಚಿಸುವ ಉದ್ದೇಶದಿಂದ ಸರಕಾರದವರು ೨ ಕೋಟಿ ರೂ. ವೆಚ್ಚದಿಂದ ೭೮ ನೀರಾವರಿ ಯೋಜನೆಯನ್ನು ಕೈಕೊಳ್ಳುವವರಿರುವರು. ಈ ಯೋಜನೆಗಳು ಪೂರ್ಣವಾದಾಗ ೯೩೦೦೦ ಎಕರೆ ಹೊಸ ಭೂಮಿ ಸಾಗುವಳಿಗೆ ಬರುವದು. ಇವುಗಳಲ್ಲಿ ೨೭೦೦೦ ಎಕರೆ ಭೂಮಿಗೆ ನೀರೊದಗಿಸುವ ತುಂಗಾ ಅಣೆಕಟ್ಟೇ ಎಲ್ಲಕ್ಕಿಂತ ದೊಡ್ಡದಾಗಿದೆ. ಈ ನೀರಾವರಿ ಯೋಜನೆಗಳಲ್ಲದೆ, ಇನ್ನೂ ೮೦ ಲಕ್ಷ ವೆಚ್ಚದಲ್ಲಿ ವರ್ಷಕ್ಕೆ ೫೦೦ ಕೆರೆಗಳಂತೆ ಸಂಸ್ಥಾನದ ೨೦೦೦೦ ಕ್ಕೆ ಮೇಲ್ಪಟ್ಟ ಕೆರೆಗಳನ್ನು ದುರಸ್ತಿಗೊಳಿಸುವ ಏರ್ಪಾಡೂ ಯೋಜಿಸಲ್ಪಟ್ಟಿದೆ.

ಕೋಲಾರ ಜಿಲ್ಹೆಗೊಂದು ಇಂಟರ ಕಾಲೇಜ ಬೇಕೆಂಬಂಶವನ್ನು ಮೈಸೂರು ಸರಕಾರದವರಿಗೆ ಮನದಟ್ಟು ಮಾಡಲು ಕೋಲಾರ ಜಿಲ್ಹಾ ಬೋರ್ಡ ಅಧ್ಯಕ್ಷ ಶ್ರೀ ಎನ್. ಸಿ. ನಾಗಯ್ಯ ರೆಡ್ಡಿಯವರ ಮುಂದಾಳ್ತನದಲ್ಲಿ ಶಿಷ್ಟಮಂಡಲವೊಂದು ಕಂದಾಯ ಮಂತ್ರಿ ಪುಲ್ಲಾರೆಡ್ಡಿಯವರನ್ನು ಭೆಟ್ಟಿಯಾಯಿತು. ಈ ಕಾಲೇಜಿಗಾಗಿ ಕಾಲೇಜ ಸಮಿತಿಯವರು ಸಂಗ್ರಹಿಸಿರುವ ೩೦೦೦೦ ರೂಪಾಯಿ ಸಾರ್ವಜನಿಕ ನಿಧಿಯನ್ನು ಈಗಾಗಲೆ ಸರಕಾರದಲ್ಲಿ ಠೇವು ಇರಿಸಲಾಗಿದೆ.

ಮೈಸೂರು ಸಂಸ್ಥಾನದಲ್ಲಿ ಉಂಟಾಗಿರುವ ಹಾಲಿನ ಕೊರತೆಯನ್ನು ಹೋಗಲಾಡಿಸಲು ಹೆಸರುಘಟ್ಟದಲ್ಲಿ ಒಂದು ಗೋಶಾಲೆಯನ್ನು ಕಟ್ಟಿಸಲು ಮತ್ತು ಸಿಂಧದಿಂದ ೧೦೦ ಉತ್ತಮ ಹಸುಗಳನ್ನೂ ನಾಲ್ಕು ಹೋರಿಗಳನ್ನೂ ತರಿಸಲು ೮೦೦೦ ರೂಪಾಯಿಗಳನ್ನು ಮೈಸೂರು ಸರಕಾರದವರು ಮಂಜೂರು ಮಾಡಿರುವರು.

ಬೆಂಗಳೂರು ನಗರದಿಂದ ನ್ಯಾಯವಿಧಾಯಕ ಸಭೆಗೆ ನಡೆಯಲಿರುವ ಉಪಚುನಾವಣೆಯಲ್ಲಿ ಕಾಂಗ್ರೆಸ ಪರವಾಗಿ ಶ್ರೀ ಎಂ ಎ ಗೋಪಾಲಸ್ವಾಮಿ ಅಯ್ಯಂಗಾರರನ್ನು ನಿಲ್ಲಿಸಲು ಮೈಸೂರು ಕಾಂಗ್ರೆಸ್ ಪಾರ್ಲಮೆಂಟರಿ ಬೋರ್ಡಿನವರು ನಿರ್ಣಯಿಸಿರುವರು.

ಮೈಸೂರು ಸಂಸ್ಥಾನದ ಹಲವೆಡೆಗಳಲ್ಲಿ ಕಳೆದ ವಾರ ಸಮೃದ್ಧವಾಗಿ ಮಳೆ ಬಂದಿದೆ. ಬೆಂಗಳೂರಲ್ಲಿ ಆದಿತ್ಯವಾರ ಪ್ರಚಂಡ ಮಳೆಯಾಯಿತು.

ಭಿಕ್ಷುಕರ ಪರಿಹಾರ ಯೋಜನೆ ಮೇರೆಗೆ ನಿರ್ಮಿಸಲ್ಪಟ್ಟಿರುವ ಕಾಯದೆಯನ್ವಯ ಕೇಂದ್ರ ಪರಿಹಾರ ನಿಧಿಯೊಂದನ್ನು ಸ್ಥಾಪಿಸಲು ಮೈಸೂರು ಸರಕಾರ ನಿರ್ದೇಶಿಸಿದೆ. ಈ ನಿಧಿಗೆ ಸಾರ್ವಜನಿಕರಿಂದಲೂ ಸ್ಥಳೀಯ ಸಂಸ್ಥೆಗಳಿಂದಲೂ ಬಂದ ಸಹಾಯ ಧನ, ಸರಕಾರದಿಂದ ದೊರೆತ ಗ್ರ್ಯಾಂಟ ಮೊದಲಾದುವುಗಳು ಸೇರಿಸಲ್ಪಡುತ್ತವೆ.

ಕೆಲಸಗಾರರ ಬೇಡಿಕೆಯನ್ನು ಮನ್ನಿಸಿ ಮಂಡ್ಯದ ಸಕ್ಕರೆ ಕಾರಖಾನೆಯವರು ಮೊನ್ನೆ ಮಾರ್ಚ ತಿಂಗಳಿಂದಾರಂಭಿಸಿ ತುಟ್ಟಿ ಭತ್ತೆಯನ್ನು ರೂಪಾಯಿ ೧೦-೮-೦ ರಿಂದ ೧೨-೮-೦ ಕ್ಕೇರಿಸಿದ್ದಾರೆಂದು ಗೊತ್ತಾಗಿದೆ.

ಮೈಸೂರು ಜಿಲ್ಹೆಯಿಂದ ಮೈಸೂರು ಕಾಂಗ್ರೆಸ ಕಾರ್ಯಕಾರಿ ಸಮಿತಿಯ ಸ್ಥಾನಕ್ಕೆ ಸದ್ಯದ ಸದಸ್ಯರಾದ ಶ್ರೀ ಕೆ ರಂಗರಾಮಯ್ಯನವರನ್ನು ಸೋಲಿಸಿ ಶ್ರೀ ಎಂ. ಎಲ್. ನಂಜರಾಜೆ ಅರಸಿನವರು ಆರಿಸಿ ಬಂದಿದ್ದಾರೆ.


ಪುರುಷರೆಲ್ಲರ ಮೆಚ್ಚುಗೆ ಪಡೆಯಲು
ಆಧುನಿಕ ಸ್ತ್ರೀಯರಿಗವಶ್ಯವಾದ
ಎರಡು ತಯಾರಿಕೆಗಳು

ಕ್ರಾನಸೋಲ:-
ಚಟ್ಟಿಯ ಮೇಲಿನ ಎಲ್ಲ ಕುಂದುಗಳನ್ನು
ಹೋಗಲಾಡಿಸುತ್ತದೆ.

ಹಂಸ ಛಾಪ ಸಾಬಾಣ:-
ಹಿತವಾದ ಒಗೆತದ ಬಗ್ಗೆ ಆಶ್ವಾಸನ ಕೊಡುತ್ತದೆ.

ಕನ್ನಡ ಸೋಪ ಆ್ಯಂಡ ಇಂಡಸ್ಟ್ರೀಜ
ಪುತ್ತೂರ (ದ. ಕನ್ನಡ)





### ಮುಂಬಯಿ ಶೇರಪೇಟೆ

ತಾ. ೧೭

ಶೇರಪೇಟೆಯಲ್ಲಿ ಕಳೆದ ವಾರ ಟಾಟಾ ಸ್ಟೀಲ ಪಾಲುಗಳಿಗೆ ಉಂಟಾದ ಇಳಿಮುಖತೆ ಇನ್ನೂ ಕಡಿಮೆಯಾಗಿಲ್ಲ. ವ್ಯಾಪಾರ ವ್ಯವಹಾರಿಗಳ ಬೆಂಬಲವಿಲ್ಲದ್ದರಿಂದ ಅದು ಎಷ್ಟು ಪ್ರಯತ್ನಪಟ್ಟರೂ ಸುಧಾರಿಸದೆ ಹೋಯಿತು. ಕಳೆದ ವಾರಕ್ಕಿಂತಲೂ ಇಳಿದುಹೋಗಿ ಅದು ಈ ಸೋಮವಾರ ೨೮೬೨-೮-೦ ಕ್ಕೆ ಬಂದು ತುಸು ಸುಧಾರಿಸಿ ೨೮೬೩—೦—೦ ಕ್ಕೆ ಬಂತು. ಡಾಯಿಂಗ ಪಾಲುಗಳ ಬೆಲೆ ಏರಿ ಕಳೆದವಾರದ ಮಧ್ಯದಲ್ಲಿ ೨೩೩೫-೦-೦ ಇದ್ದುದು ಈಗ ೨೩೬೦—೦—೦ ಆಗಿದೆ. ಗಿರಣಿ ಪಾಲುಗಳಲ್ಲಿ ಸ್ವದೇಶಿ ೭೭೪-೦-೦ ರಿಂದ ೭೬೮—೦—೦ ಕ್ಕಿಳಿಯಿತು. ಕೋಹಿನೂರು ಈ ವಾರಾದಿಯಲ್ಲಿ ೮೧೫-೦-೦ ಇದ್ದುದ್ದು ಈಗ ೮೬೧-೦-೦ ಕ್ಕೇರಿದೆ. ಸೆಂಚೂರಿ ೧೦೩೫-೦-೦ ರಿಂದ ೧೦೨೦-೦-೦ ಕ್ಕೂ ಸೆಂಟ್ರಲ ಇಂಡಿಯಾ ೪೬೩-೦-೦ ರಲ್ಲಿ ಯಥಾಸ್ಥಿತಿ. ಬೇಲಾಪುರ ೨೯೦-೮-೦ ಯಿಂದ ೨೮೯-೦-೦ ಕ್ಕಿಳಿಯಿತು ಅಸೋಸಿಯೇಟೆಡ್ ಸಿಮೆಂಟ್ಸ ೨೫೩-೦-೦ ರಿಂದ ೨೫೧-೦-೦ ಕ್ಕಿಳಿಯಿತು.

ಸೆಂಟ್ರಲ ಬ್ಯಾಂಕ ಪಾಲುಗಳು ಇನ್ನಷ್ಟು ಇಳಿದು ರೂ. ೧೨೨—೮—೦ ಕ್ಕೆ ಬಂದಿದ್ದರೆ ಇಂಪೀರಿಯಲ್ ಎಫ್. ಸಿ. ಕಳೆದ ವಾರಾಂತ್ಯದಲ್ಲಿ ರೂ. ೨೪೮೨-೮-೦ ದ್ದು ರೂ. ೨೫೦೦-೦-೦ ಕ್ಕೇರಿತು. ರಿಝರ್ವ ಬ್ಯಾಂಕು ೧೬೯-೦-೦ ರಲ್ಲಿದ್ದುದು ೧೬೨ ಕ್ಕಿಳಿದಿದೆ.

ಸರಕಾರಿ ಸಾಲಪತ್ರಗಳಲ್ಲಿ ಜಿ. ಪಿ. ನೋಟು ರೂ. ೧೦೨-೧೪-೦ ರಲ್ಲಿಯೂ ೩॥ ದರ ೧೯೪೭-೫೦ ಸಾಲ ರೂ. ೧೦೨-೮-೦ ರಲ್ಲಿಯೂ ಇವೆ.

### ಚಿನ್ನ ಬೆಳ್ಳಿ

ಬೆಳ್ಳಿಯ ದರ ಕಳೆದವಾರ ಕೊನೆಗೆ ರೂ. ೧೬೦—೧೪—೦ ಕ್ಕಿಳಿದು ಹೋದರೂ ಈ ವಾರ ಸುಧಾರಿಸಿ ರೂ. ೧೬೨-೯-೦ ಕ್ಕೇರಿದರೂ ಪುನಃ ೧೬೧-೪-೦ ಕ್ಕೆ ಇಳಿದು ಬಿಟ್ಟಿತು ಒಟ್ಟಿನ ಮೇಲೆ ಪೇಟೆ ಮಂದೀ ಪ್ರವೃತ್ತಿಯನ್ನೆ ತೋರಿಸುತ್ತಿದೆಯೆನ್ನಬೇಕು. ಚಿನ್ನವೂ ೯೮-೮-೦ ರಿಂದ ರೂ. ೯೮-೧೨-೦ಕ್ಕೇರಿದರೂ ಹಿಂದೇಟು ಬಿದ್ದು ೯೭-೦-೦ ಕ್ಕೆ ಬಂತು. ವಾಯಿದಾ ಚಿನ್ನ ರೂ. ೯೨-೧೪-೦ ಸಾವರೀನ ೬೭-೪-೦.

### ಅರಳಿ ಪೇಟೆ

ಅರಳೀಪೇಟೆಯಲ್ಲಿ ಮಂದತ್ವ ಬಂದೊದಗಿದೆ. ಮೇ ವಾಯಿದೆ ಸಮೀಪಿಸುತ್ತಿರುವದರಿಂದಲೂ ತಿಂಗಳುಗಟ್ಟಲೆ ತೇಜಿ ಮಂದಿ ವ್ಯವಹಾರದ ತೀರ್ಮಾನವಾಗುವ ವರೆಗೆ ಪೇಟೆ ಅನಿಶ್ಚಿತವಾಗಿಯೇ ಇರುವದು. ಸದ್ಯಕ್ಕೆ ಬೆಲೆಗಳಲ್ಲಿ ಬಹಳ ಸುಧಾರಣೆ ನಿರೀಕ್ಷಿಸುವದು ಸಾಧ್ಯವಿಲ್ಲ. ಮೇ ವಾಯಿದೆ ತಾ. ೧೩ ಕ್ಕೆ ೪೫೮-೦-೦ ರಲ್ಲಿದ್ದುದ್ದು ೪೫೬-೦-೦ ರ ವರೆಗೂ ಇಳಿದು ಪುನಃ ೪೬೦-೦-೦ ಕ್ಕೇರಿತು. ಜುಲೈ ೪೬೭-೦-೦ ಸಪ್ಟಂಬರ ೪೭೪ ೪೦.

### ಎಣ್ಣೆಕಾಳು

| | | |
|---|---|---|
| ಶೇಂಗಾ | ರೂ. | ೧೧೦೬—೦—೦ |
| ಅಗಸಿ | ,, | ೨೪-೬—೦ |
| ಅಗಸಿಎಣ್ಣೆ | | ೧೩-೫-೦ |

### ಸಾಂಗಲಿ ಪೇಟೆ

| | | |
|---|---|---|
| ಬೆಲ್ಲ ಬಂಗಾಲಿ ಮಣ | ರೂ. | ೧೪—೧೬ |
| ಅರಿಸಿಣ ಹೇರು | ,, | ೬೮—೭೬ |
| ಮೆಣಸಿನಕಾಯಿ ಹೇರು | ,, | ೧೬೦—೧೮೫ |
| ಶೇಂಗಾ (ಖಂಡಿ) | ,, | ೯೦-೯೧ |
| ಮಿರಜಿ ತಂಬಾಕು (ಹೇರು) | | ೧೦೦—೨೧೫ |
| ಪಂಧರಪುರ ತಂಬಾಕು | | ೧೭೫—೩೧೦ |
| ಆಕೋಳ ತಂಬಾಕು | | ೧೬೦—೩೦೦ |

### ಹುಬ್ಬಳ್ಳಿ ಪೇಟೆ

| | |
|---|---|
| ಹತ್ತಿ | ೩೦೫—೩೧೭ |
| ನರಗುಂದ ಅರಳಿ | ೨೦೮ |
| ಹುಬ್ಬಳ್ಳಿ ಕುಂದಗೋಳ ಲಕ್ಷ್ಮೀಶ್ವರ ಅರಳಿ | ೨೧೧—೧೫ |

## ಶ್ರೀ ಕೆ ವಿ ಅನಂತರಾಮಯ್ಯನವರ ನಿಧನ

### ಮೈಸೂರಿನ ಹಿಂದಿನ ಮಂತ್ರಿಗಳು

ಮೈಸೂರ ಸಂಸ್ಥಾನದ ಹಿಂದಿನ ಕಂದಾಯ ಮತ್ತು ಹಣಕಾಸಿನ ಮಂತ್ರಿಗಳೂ ಅನಂತರ ಭೋಪಾಲದಲ್ಲಿ ನರೇಂದ್ರ ಮಂಡಳದ ಕಿರಿ ಸಂಸ್ಥಾನಗಳ ಸಮಿತಿಯ ನಿರ್ದೇಶಕರೂ ಆಗಿದ್ದ ರಾಜಮಂತ್ರ ಪ್ರವೀಣ ಶ್ರೀ ಕೆ. ವಿ. ಅನಂತರಾಮಯ್ಯನವರು ಬೆಂಗಳೂರು ಬಸವನಗುಡಿಯಲ್ಲಿರುವ ತಮ್ಮ ಮನೆಯಲ್ಲಿ ತಾ ೧೪ ಮಧ್ಯಾಹ್ನ ದೈವಾಧೀನರಾದರು. ಮಧುಮೇಹ ಸಂಬಂಧವಾದ ರೋಗದಿಂದ ಶ್ರೀಯುತರು ಬಳಲುತ್ತಿದ್ದು ಭೋಪಾಲದಿಂದ ಚಿಕಿತ್ಸೆಗಾಗಿ ಬೆಂಗಳೂರಿಗೆ ಬಂದಿದ್ದರು ಮೃತ್ಯುಕಾಲದಲ್ಲಿ ಅವರಿಗೆ ೭೯ ವರ್ಷಗಳಾಗಿದ್ದವು. ಅಸಿಸ್ಟೆಂಟ ಕಮೀಶನರರಾಗಿರುವ ಶ್ರೀ ಎ ವಿಶ್ವನಾಥರವರೊಬ್ಬರೇ ಅವರ ಗಂಡುಮಕ್ಕಳಾಗಿದ್ದು ಇಬ್ಬರು ಹೆಣ್ಣುಮಕ್ಕಳೂ ಅವರ ಸೆಂಡತಿಯೂ ಇದ್ದಾರೆ. ಶ್ರೀಯುತರು ೧೯೦೮ ರಲ್ಲಿ ಸಿವ್ಹಿಲ ಸರ್ವಿಸ ಪರೀಕ್ಷೆಯಲ್ಲಿ ಪ್ರಥಮ ಸ್ಥಾನ ಗಳಿಸಿ ಉತ್ತೀರ್ಣರಾಗಿದ್ದರು.

ಅನಂತರ ಸರಕಾರದ ಅನೇಕ ಉಚ್ಚ ಅಧಿಕಾರಿಗಳಲ್ಲಿ ಇದ್ದು ಕೊನೆಗೆ ಮಂತ್ರಿಪದ ಹೊಂದಿ ಸೇವೆಯಿಂದ ನಿವೃತ್ತರಾದರು.

ಅವರ ನಿಧನ ನಿಮಿತ್ತ ಸೆಕ್ರೆಟರಿಯಟ್ಟಿಗೆ ತಾ. ೧೫ ಕ್ಕೆ ರಜಾ ಕೊಟ್ಟು ಅವರಲ್ಲಿ ಮೈಸೂರು ಸರಕಾರಕ್ಕಿದ್ದ ಆದರ ವ್ಯಕ್ತಗೊಳಿಸಲಾಯಿತು.

ಅವರ ಆತ್ಮಕ್ಕೆ ಶಾಂತಿಯಿರಲಿ.

## ಬೆಂಗಳೂರು ನಗರ ಸಭೆ

### ಅಧ್ಯಕ್ಷರ ಮೇಲೆ ಅವಿಶ್ವಾಸ ಸೂಚನೆ

ಬೆಂಗಳೂರು ನಗರ ಸಭೆಯ ಅಧ್ಯಕ್ಷರಾದ ಶ್ರೀ ಎಚ್ ಸಿ ಸೂರ್ಯನಾರಾಯಣರಾವ್ ಮತ್ತು ಉಪಾಧ್ಯಕ್ಷ ಶ್ರೀ ಪಿ ವಿ. ರಾಮಚಂದ್ರ ಗುಪ್ತ (ಇಬ್ಬರೂ ಕಾಂಗ್ರೆಸ್) ಇವರ ಮೇಲೆ ಅವಿಶ್ವಾಸ ಸೂಚಿಸುವ ಗೊತ್ತುವಳಿಯೊಂದು ತಾ ೧೨ ಕ್ಕೆ ನಗರ ಸಭೆಯ ವಿಶೇಷಾಧಿವೇಶನದಲ್ಲಿ ಅಂಗೀಕೃತವಾಯಿತು. ನಗರ ಸಭೆಯ ಅಧ್ಯಕ್ಷ ಚುನಾವಣೆಯ ವಿಷಯದಲ್ಲಿ ಕಳೆದ ೪ ತಿಂಗಳಿಂದಲೂ ಉಂಟಾದ ಚರ್ಚೆ, ಅದರಲ್ಲಿ ಶ್ರೀ ಕೆ. ಟಿ. ಭಾಷ್ಯಂ ಅವರಂಥ ಪ್ರಭಾವಶಾಲಿ ಕಾಂಗ್ರೆಸ ನಾಯಕರ ಕೈಯಿದ್ದುದರಿಂದ ಕಾಂಗ್ರೆಸ್ ಸಂಸ್ಥೆಯಲ್ಲಿ ಈ ಪ್ರಶ್ನೆಯಿಂದುಂಟಾದ ಒಡಕು, ನಗರ ಸಭೆಯ ೧೧ ಕಾಂಗ್ರೆಸ ಸದಸ್ಯರು ರಾಜೀನಾಮೆ ಕೊಟ್ಟದ್ದು ಮುಂತಾದ ಘಟನೆಗಳ ಸ್ವಯಂಸಿದ್ಧ ಪರಿಣಾಮವಾಗಿ ಈ ಅವಿಶ್ವಾಸ ಗೊತ್ತುವಳಿಯ ಸ್ವೀಕಾರ ಸಾಧ್ಯವಾಯಿತು. ಕಾಂಗ್ರೆಸ ಸದಸ್ಯರು ರಾಜಿನಾಮೆ ಕೊಟ್ಟದ್ದರಿಂದ ತೆರವಾದ ಸ್ಥಳಗಳಿಗೆ ಮರು ಚುನಾವಣೆಯಾದಾಗ ಪುನಃ ಕಾಂಗ್ರೆಸ್ಸಿಗರು ಸ್ಪರ್ಧಿಸಿದರೂ ಹಿಂದಿನ ಬಾರಿ ಸಂಪಾದಿಸಿದ ಯಶಸ್ಸನ್ನು ಸಂಪಾದಿಸಲಾರದೆ ಹೋದರು. ಪರಿಣಾಮವಾಗಿ ಕಾಂಗ್ರೆಸ್ ಪಕ್ಷ ನಗರ ಸಭೆಯಲ್ಲಿ ಅಲ್ಪಸಂಖ್ಯಾಕವಾಯಿತು. ಆಗ ವಿರೋಧಿ ಪಕ್ಷದ ಸ್ವತಂತ್ರ ಸದಸ್ಯರು ಶ್ರೀ ಸೂರ್ಯನಾರಾಯಣರಾಯರಿಗೆ ರಾಜೀನಾಮೆ ಕೊಡಲು ಒತ್ತಾಯ ಮಾಡಿದರೆಂದೂ ಆದರೆ ಕಾಂಗ್ರೆಸ ವರಿಷ್ಠರ ಅನುಮತಿಯಿಲ್ಲದೆ ತಾವು ರಾಜೀನಾಮೆ ಕೊಡಬರುವದಿಲ್ಲೆಂದು ಅವರು ಹೇಳಿದ್ದರಿಂದ ಈ ಅವಿಶ್ವಾಸ ಸೂಚನೆ ತರಬೇಕಾಯಿತೆಂದೂ ಸೂಚನೆಯ ಮಂಡಕರು ಹೇಳಿದರು.

ಬೆಂಗಳೂರು ನಗರ ಸಭೆಯ ನಿಯಮದಂತೆ ಈ ಅವಿಶ್ವಾಸ ಗೊತ್ತುವಳಿಯ ಕಾರಣದಿಂದ ಈಗಲೇ ರಾಜೀನಾಮೆ ಕೊಡಬೇಕಾಗುವದಿಲ್ಲ. ಇನ್ನೊಂದು ತಿಂಗಳ ನಂತರ ಮತ್ತು ನಾಲ್ಕು ತಿಂಗಳ ಒಳಗೆ ಇನ್ನೊಮ್ಮೆ ಅವಿಶ್ವಾಸ ಗೊತ್ತುವಳಿ ಹೀಗೆಯೇ ಅಂಗೀಕೃತವಾಗಬೇಕಾಗುತ್ತದೆ.

## ದಕ್ಷಿಣ ಕನ್ನಡ

ಪುತ್ತೂರು ಹಾಯಸ್ಕೂಲಿನ ಹೊಸ ಕಟ್ಟಡದ ಉದ್ಘಾಟನಾ ಸಮಾರಂಭವನ್ನು ತಾ ೧೨ ಕ್ಕೆ ಮದ್ರಾಸ ಶಿಕ್ಷಣ ನಿರ್ದೇಶಕರಾದ ಡಾ. ಎಸ್ ಆರ್ ಯು ಸವೂರ ಇವರು ನೆರವೇರಿಸಿದರು. ಅಂದೇ ಅವರ ಅಧ್ಯಕ್ಷತೆಯಲ್ಲಿ ಪುತ್ತೂರು ಹಾಯಸ್ಕೂಲಿನ ರಜತಮಹೋತ್ಸವವೂ ನೆರವೇರಿತು. ಅಧ್ಯಕ್ಷರು ಸಂದರ್ಭೋಚಿತವಾಗಿ ಭಾಷಣ ಮಾಡಿದರು. ಹಾಯಸ್ಕೂಲ ಬಿಡುವಾಗ ವಿದ್ಯಾರ್ಥಿಗಳು ದೇಶಸೇವೆ ಮತ್ತು ಸಮಾಜ ಸೇವೆಗೆ ಸಿದ್ಧರಾಗುವಂತಿರಬೇಕೆಂದು ಅವರು ಹೇಳಿದರು. ವಿವಿಧ ವಿನೋದಾವಳಿಗಳೊಡನೆ ಸಮಾರಂಭ ಕೊನೆಗೊಂಡಿತು.

ದಕ್ಷಿಣ ಕನ್ನಡ ಟ್ರೇಡ ಯೂನಿಯನ್ ಕೌನ್ಸಿಲ ಸಭೆಯೊಂದು ತಾ ೭ ಕ್ಕೆ ಮಂಗಳೂರಲ್ಲಿ ನಡೆದು ಶ್ರೀ ಕೆ ಕೆ ಶೆಟ್ಟರ ರಾಜೀನಾಮೆಯನ್ನು ಸ್ವೀಕರಿಸಲಾಯಿತು. ಅದು ಸ್ವೀಕರಿಸಿದ ಅನೇಕ ಗೊತ್ತುವಳಿಗಳಲ್ಲಿ ಬೀಡಿ ಕೂಲಿಕಾರರ ಸಂಕಷ್ಟ ನಿವಾರಣೆ ನಿಜವಾಗಿ ಆಗಬೇಕಾದರೆ ಬೀಡಿ ವ್ಯವಸಾಯವನ್ನು ಸಹಕಾರಿ ಸಂಘದ ಪದ್ಧತಿಯಲ್ಲಿ ಸಂಘಟಿಸಬೇಕಾಗಿದೆಯೆಂದೂ ಅದಕ್ಕಾಗಿ ಸಹಕಾರಿ ರೀತಿಯಲ್ಲಿ ಬೀಡಿ ಉತ್ಪಾದನೆಯನ್ನು ಉಡುಪಿಯಲ್ಲಿ ಉಪಕ್ರಮಿಸಬೇಕೆಂದೂ ಆದ ನಿರ್ಣಯವೊಂದು ನೀದಾದಲ್ಲಾದ ಕಡಿತವನ್ನು ಶೋಧಿಸುವ ಒಂದು ಗೊತ್ತುವಳಿಯೂ ಆಯಿತು.

ದಕ್ಷಿಣ ಕನ್ನಡ ಜಿಲ್ಹೆಯ ಗ್ರಾಮೋದ್ಯೋಗ ಕೇಂದ್ರಗಳಲ್ಲಿ ಸೇರಿ ಕಳೆದ ಮಾರ್ಚ ತಿಂಗಳಲ್ಲಿ ಒಟ್ಟು ರೂ. ೧೩೬೪—೦—೦ ಬೆಲೆಯ ೮೨೮೪ ಲಡಿ ನೂಲು ಉತ್ಪಾದನೆಯಾಗಿದ್ದು ೩೧೨೬॥ ಗಜ ಖಾದಿ ಹುಟ್ಟುವಳಿಯಾಗಿದೆ. ( ಬೆಲೆ ರೂ. ೪೩೦೬-೦-೭ ) ಯೆಂದು ತಿಳಿಯುತ್ತದೆ. ಇದಲ್ಲದೆ ಸ್ವಾವಲಂಬಿ ನೂಲುವವರಿಂದ ೧೦೦೭ ಲಡಿ ನೂಲು ಬಂದಿರುವದು.

ಮಂಗಳೂರಿನ ಎಂ ಕೃಷ್ಣನಾಯಕ ಆ್ಯಂಡ್ ಸನ್ಸ್ ಸಂಸ್ಥೆಯ ಇಬ್ಬರು ಪಾಲುಗಾರರಿಗೆ ಕಬ್ಬಿಣದ ನಳಿಗಳನ್ನು ನಿಯಂತ್ರಣ ನಿಬಂಧನೆಗಳಿಗೆ ವ್ಯತಿರಿಕ್ತವಾಗಿ ಮಾರಿದುದಕ್ಕೆ ತಲಾ ೨೦೦ ರೂ. ದಂಡ ವಿಧಿಸಲ್ಪಟ್ಟಿದೆ.

## ರೇಲ್ವೆ ನೋಕರರಿಗೆ ಸೌಕರ್ಯಗಳು

### ರೇಲ್ವೆ ಕಮೀಶನರರ ಪ್ರಕಟನೆ

ರೇಲ್ವೆ ಕಮೀಶನರರಾದ ಗ್ರಿಫಿತ್ಥ್ಸರವರು ರೇಲ್ವೆ ಕೆಲಸಗಾರರಿಗೆ ಕೆಳಗಿನ ಸೌಕರ್ಯಗಳನ್ನು ಸಾರಿದ್ದಾರೆ.

ರಜೆ ಹಾಗು ದುಡಿತದ ವೇಳೆ ಇವುಗಳನ್ನು ಮಾತ್ರ ನಿರ್ಧರಿಸುವ ಬಗ್ಗೆ ಮಧ್ಯಸ್ಥಗಾರನನ್ನು ನೇಮಿಸಲು ನಿರ್ಧರಿಸಿರುವದಾಗಿ ಸರಕಾರದವರು ತಿಳಿಸಿದ್ದಾರೆ. ಸದ್ಯದ ತುಟ್ಟಿ ಭತ್ತೆಯನು ೧೯೪೪ ರ ಜುಲೈ ೧ ರಿಂದ ಕೊಡಲಾಗುವದು. ಸಂಬಳದಲ್ಲಿ ನೂರಕ್ಕೆ ೧೭॥ ಯ ಮೇಲ್ಪಟ್ಟು ತುಟ್ಟಿ ಭತ್ತೆಯನ್ನು ತೆಗೆದುಕೊಳ್ಳದಿದ್ದವರಿಗೆ ೧-೭-೪೪ ರಿಂದ ೧-೧-೪೫ ರ ವರೆಗೆ ತಿಂಗಳಿಗೆ ೩ ರೂ. ಗಳಂತೆ ಅಧಿಕ ಸಹಾಯ ಧನ ಕೊಡಲಾಗುವದು. ಕಾಯಂ ಜಾಗೆಗಗಳಲ್ಲಿ ತಾತ್ಪೂರ್ತಿಕವಾಗಿ ಕೆಲಸ ಮಾಡುತ್ತಿರುವ ನೌಕರರಲ್ಲಿ ಅನೇಕರನ್ನೂ ಕಿತ್ತೊಗೆಯಲಾಗುವದಿಲ್ಲವೆಂದು ರೇಲ್ವೆ ಬೋರ್ಡದವರು ನಂಬಿದ್ದಾರೆ.

ಯುದ್ಧೋತ್ತರ ಪಗಾರ ಸ್ಕೇಲ ಹಾಗು ಭತ್ತೆಯ ಪ್ರಶ್ನೆಯನ್ನು ವಿಚಾರಿಸಲು ಕೇಂದ್ರ ಸರಕಾರವು ಒಂದು ಮಂಡಳವನ್ನು ನೇಮಿಸುವದು.

# ವಿ ಚಿ ತ್ರಾ ದೇ ವಿ

ಲೇ:— ವೆಂಕಣ್ಣಾಚಾರ್ಯ ಪಪ್ಪು ಬಿ ಎ ಎಲ್ ಎಲ್ ಬಿ ವಕೀಲ ಹುಬ್ಬಳ್ಳಿ

ಅಗೋ! ಅಲ್ಲಿ ನೋಡಿರಿ!! ರೊಲ್ಸರಾಯಿಸ್ಸ ಕಾರಿನಿಂದಿಳಿದು ವಿಚಿತ್ರಾದೇವಿಯು ಹವಾ ಸೇವನೆಗಾಗಿ ಹೊರಟಿದ್ದಾಳೆ. ವಿಶೇಷ ಓಡಾಡದ ಅವಳು ನಡೆಯುವದನ್ನೇ ಮರೆತ ತನ್ನ ಕಾಲುಗಳಿಗೆ ನಡಿಗೆಯನ್ನು ಕಲಿಸುತ್ತಾ ಸಾವಧಾನವಾಗಿ ಸಾಗಿದ್ದಾಳೆ.

ಸೌಂದರ್ಯೋಪಾಸಕ ಭಕ್ತರೆಲ್ಲ ಅವಳ ಸುತ್ತುಮುತ್ತಲೂ ಸಂತೆಯಾಗಿ ನೆರೆದಿದ್ದಾರೆ. ಕೇವಲ ಅವಳ ದರ್ಶನದ ಸಲುವಾಗಿ ಸಂತೆಯನ್ನು ಹೋಳು—ನಿರಕ್ಷರಿ ಹಳ್ಳಿಗನ ಶಬ್ದಪ್ರಯೋಗ, ಆದರೂ ಗ್ರಾಮ್ಯವಲ್ಲ ಅಂ, ಕಾವ್ಯಮಯ ಕನ್ನಡ ಶಬ್ದಗಳ ರೀತಿಯೇ ಹಾಗೆ—ಮಾಡಿ ಮುಂದುವರಿಯುತ್ತಿದ್ದಾಳೆ.

ವಿಚಿತ್ರಾದೇವಿಯು ಬೆಳ್ಳಿ ಬಣ್ಣದ ಪರದೆಯ ಮೇಲೆ ಕಂಣು ಕುಕ್ಕಿಸುವಂತೆ ಚಮಕುವ ನಕ್ಷತ್ರ. ಚಲನಚಿತ್ರ ತಾರೆಯರೆಂದರೆ ಈ ಕಪ್ಪು ಬಸಿ ನಾಗರಿಕತೆಯ ಆರಾಧ್ಯ ದೇವಿಯರು. ಸಾಕ್ಷಾತ್ ದೇವರು ಅವತರಿಸಿದರೆ ಕೂಡಾ ಇಂತಹ ದೊಡ್ಡ ಜನಸಮುದಾಯವು ದೇವನನ್ನು ಹಿಂಬಾಲಿಸದು. ದೇವರಿಗಿಂತಲೂ ಹೆಚ್ಚು ಜನಪ್ರಿಯತೆ ತಾರಾಗಣದ ವಿಚಿತ್ರಾದೇವಿಯದು.

ಚಲನಚಿತ್ರ ಯಾತ್ರಿಕರಿಗೆ ರುಚಿಸುವ ಚಲುವಿಕೆಯುಳ್ಳ ವಿಚಿತ್ರಾದೇವಿಯು ಒನಪು ವೈಯಾರಿಗಳ ತವರುಮನೆ.

ಅವಳ ಸೌಂದರ್ಯ ಸಾಧನಗಳು—ಪಫ್, ಪೇಂಟ್ಸ, ಪೌಡರ, ಪೋಮೇಡ, ಪಾಂಡ್ಸಕ್ರೀಮ, ಲಿಪ್‌ಸ್ಟಿಕ್ ನೇಲಪಾಲಿಶ್—ಸಪ್ತಸಮುದ್ರಗಳನ್ನು ದಾಟಿ ಬರಬೇಕು. ಬಂಗಾರ ಪರಾಗಮಿಶ್ರಿತ ಪೌಡರು ಮುಖಕಮಲಗಳನ್ನು ಥಳಥಳ ಬೆಳಗುತ್ತದೆ. ರಂಜಕ ಮೇಣ ಲೇಪಿತವಾದಅವಳ ತೊಂಡೆ ಹಂಣಿನ ಸದೃಶವಾದ ತುಟಿಗಳನ್ನು ಮೋಹಕವಾದ ಹೂವಿನ ಪಕಳೆಗಳೆಂದು ತಿಳಿದು ರಸಾಸ್ವಾದನೆಗಾಗಿ ಜೇನು ಹುಳಗಳು ಎಲ್ಲಿ ಮುತ್ತುವವೊ ಎಂಬ ಭಯ. ಚಂದ್ರನ ಕಾಂತಿಯನ್ನು ಹೆಚ್ಚಿಸುವ ಕಲಂಕದಂತೆ ಕರಿ ಚಿಕ್ಕೆಯೊಂದು ದೈನಂದಿನ ಸ್ಥಾನ ಬದಲಾಯಿಸುತ್ತ ಅವಳ ಮೋರೆಯ ಮೇಲೆ ಇದೆ. ಈ ಕೃತಕ ಸೊಬಗೆಲ್ಲ ಪಾಶ್ಚಾತ್ಯ ಭಗಿನಿಯರಿಂದ ಕಡತೆಗೆದುಕೊಂಡದ್ದು. ಗೋಪುರ ಗಡಿಯಾರನ್ನು ನೋಡಿ ತಮ್ಮ ಗಡಿಯಾರಗಳನ್ನು ಸರಿ ಇಟ್ಟುಕೊಳ್ಳುವಂತೆ ವನಿತೆಯರೆಲ್ಲರೂ ತಮ್ಮ ವೇಷಭೂಷಣಗಳನ್ನು ಅವಳನ್ನು ನೋಡಿ ತಿದ್ದಿಕೊಳ್ಳುವರು.

ತನ್ನ ಮುಗುಳ್ನಗೆಯನ್ನು ಪೇಟಂಟ ಮಾಡಿಸುವದರಲ್ಲಿ ಹಿಂದೀ ತಾರಾಮಂಡಲದಲ್ಲಿ ಅವಳು ಮೊದಲಿಗಳು. ತನ್ನ ಕೋಗಿಲ ಕಂಠವ ವಿಮಾ ಸುಪ್ರಸಿದ್ಧ ಕಂಪನಿಯಲ್ಲಿ ಹೇರಳವಾದ ಹಣಕ್ಕೆ ಇಳಿಸಿದ್ದಾಳೆ.

ಕೇಶಭೂಷಣ ಕುಶಲರು, ವೇಷಭೂಷಣ ನಿಪುಣರು, (Tonsorial and Saratorial Artists) ಅಧುನಿಕ ಸೊಬಗಿನ ಜನಕರು. ಅಬಲಾಕೇಶ ಕರ್ತನಾಲಯದ ಮಾಲಕಳೊಬ್ಬಳು "By appo'ntme t to Vichitradevi" (ವಿಚಿತ್ರಾದೇವಿಯ ಕೇಶ ಸೇವೆ ಸಲ್ಲಿಸುವ) ಎಂದು ಬರೆದ ಹಲಗೆಯನ್ನು ಹಚ್ಚಿದ್ದಾಳೆ. ಕೇಶಭೂಷಣ ಕಲೆಯ ದ್ಯೋತಕವೆಂದು ತಾನೇ ಮಾರ್ಪಡಿಸಿದ ಉಂಗುರಗೂದಲುಗಳುಳ್ಳ ವಿಚಿತ್ರಾದೇವಿಯ ಮೂರ್ತಿಯನ್ನು ತನ್ನ ಕರ್ತನಾಲಯದಲ್ಲಿ ಸ್ಥಾಪಿಸಿದ್ದಾಳೆ. ಆ ವಿಗ್ರಹವು ಅಗ್ರಹದಿಂದ ಗ್ರಾಹಕರನ್ನು ಸೂಜಿಗಲ್ಲಿನಂತೆ ಆಕರ್ಷಿಸುತ್ತದೆ, ಆಮಂತ್ರಿಸುತ್ತದೆ.

ಕ್ರಿಕೆಟ್‌ಕ್ರೀಡಾ ಕಿಶೋರರ ಹೆಸರುಗಳನ್ನು ಬ್ಯಾಟಿಗೆ, ಟೆನಿಸ್ಸ ಪಟುಗಳ ಹೆಸರು ರ್‍ಯಾಕೆಟ್ಟಿಗೆ ಇಡುವಂತೆ ಸೌಂದರ್ಯ ಸಲಕರಣೆಗಳಿಗೆ ಸುಗಂಧದ್ರವ್ಯ ಕಾರಖಾನೆದಾರರು ವಿಚಿತ್ರಾದೇವಿಯ ಹೆಸರನ್ನು ಇಟ್ಟಿದ್ದಾರೆ. ನಖರಂಜನ ಹುಬ್ಬು ಪೇಂಟ, ಸ್ನೊ, ಹೇಯರಆಯಿಲ್, ಚಲಿಸುವ ಮುಖತಿಲಕ ಮುಂತಾದವುಗಳು ಅವಳ ಹೆಸರಿನಿಂದ ಅಂಗಡಿಗಳಲ್ಲಿ ಮೆರೆದಾಡುತ್ತವೆ.

ಸಾಮಾನ್ಯತಃ ಸಾಬೂನಿನ ನಿರ್ಮಲತೆ ಉಪಯುಕ್ತತೆ ಮೊದಲಾದ ಗುಣಗಳ ಬಗ್ಗೆ ರಾಸಾಯನಿಕರ ಅಭಿಪ್ರಾಯವೇ ಪ್ರಮಾಣ. ಆದರೆ ಸಾಬೂನಿನ ಕಾರಖಾನೆದಾರರು ತಮ್ಮ ಸಾಬೂನುಗಳ ಬಗ್ಗೆ ವಿಚಿತ್ರಾದೇವಿಯು ಅಧಿಕಾರವಾಣಿಯಿಂದ ಕೊಟ್ಟ ಅಭಿಪ್ರಾಯವನ್ನು ಅಚ್ಚು ಹಾಕಿ ತಮ್ಮ ಹುಟ್ಟುವಳಿಯನ್ನು ಹೆಚ್ಚೆಚ್ಚು ಮಾರಿಕೊಂಡು ಜನರ ಮೆಚ್ಚುಗೆಯನ್ನು ಸಹ ಪಡೆಯುತ್ತಾರೆ. ಸಾಬೂನಿನ ಖಪ್ಪಿಗೆ ವಿಚಿತ್ರಾದೇವಿಯು ಹೀಗೆ ಅಪ್ರತ್ಯಕ್ಷ ರೀತಿಯಿಂದ ನೆರವಾಗುತ್ತಾಳೆ. ವಿಪರೀತ ಕಾಲ, ತಮಗೆ ಅರಿಯದ ವಿಷಯಗಳ ಮೇಲೆ ಚಲನಚಿತ್ರ ನಕ್ಷತ್ರಗಳು ಅಭಿಪ್ರಾಯ ಕೊಡುತ್ತಾರೆ. ಮತ್ತು ಅವರ ಮತವೇ ಲೋಕಮತವಾಗಿ ಬಿಡುತ್ತದೆ.

ನೀರಸ ಕಾದಂಬರಿಯನ್ನು ಬರೆದರೂ ಅದಕ್ಕೆ

-ಮುಂದಿನ ಪುಟದಲ್ಲಿ

AC. 63. —K

# ಇತರರು ಬದುಕುವಂತಾಗಬೇಕಾದರೆ

"ಈಗಿನ (ಆಹಾರ) ಕೊರತೆಯ ಪ್ರಸಂಗದಿಂದ ಪಾರಾಗುವುದಕ್ಕೆ ನಾವೆಲ್ಲರೂ ಏನು ಮಾಡಬೇಕೆಂಬುದನ್ನು ಇನ್ನು ನಾನು ಹೇಳುತ್ತೇನೆ. ಆಡಳಿತೆಗೆ ಬೇಕಾಗುವ ಮುಖ್ಯ ಅವಶ್ಯಕತೆಗಳು ಇವು: ಶೀದಾ ಪದ್ಧತಿಯನ್ನು ಶಕ್ಯವಿದ್ದಷ್ಟು ವಿಸ್ತರಿಸುವುದು; ಇಡಿ ಹಿಂದುಸ್ಥಾನದಲ್ಲಿ ಹೆಚ್ಚಾಗಿ ಬೆಳೆಯುವ ಕಾಳುಗಳನ್ನು ವಶಕ್ಕೆ ತೆಗೆದುಕೊಳ್ಳುವುದು; ಮತ್ತು ಈ ಹೆಚ್ಚಿನ ಕಾಳನ್ನು ಅವಶ್ಯವಿರುವ ಭಾಗಗಳಲ್ಲಿ ಸರಿಯಾಗಿ ಹಂಚುವುದು. ಎಲ್ಲಕ್ಕೂ ಹೆಚ್ಚಿನ ಗಂಡಾಂತರಗಳು ಇವಾಗಿವೆ: ಕೂಡಿಹಾಕಿ, ತಮ್ಮ ಸರಿಯಾದ ಪಾಲಿಗಿಂತ ಹೆಚ್ಚಿಗೆ ದೊರಕಿಸಲೆತ್ನಿಸುವ ಆಶೆಬುರುಕ ಮತ್ತು ಸ್ವಾರ್ಥಿಗಳಾದ ಜನರು; ಕಳ್ಳಪೇಟೆ ಅಥವಾ ಲಂಡಗುಳಿತನ; ಪೊಳ್ಳು ಸುದ್ದಿಗಳನ್ನು ಹಬ್ಬಿಸಿ ಜನರನ್ನು ಗಾಬರಿಗೊಳಿಸಿ ಕಳ್ಳ ಪೇಟೆಯವರಿಗೆ ಒಳ್ಳೇ ಸಂಧಿಯನ್ನು ಕಲ್ಪಿಸಿಕೊಡುವ ಅಂಜುಬುರುಕರು; ಮತ್ತು ಆಲಸ್ಯದಿಂದಿರುವವರು, ತಮಗೆ ಸಾಕಷ್ಟು ಇರುವುದರಿಂದ ಇತರರಿಗೆ ತಾವೇಕೆ ಸಹಾಯಮಾಡಬೇಕೆನ್ನುವ ಸೋಮಾರಿಗಳು.

## ಹಿಂದುಸ್ಥಾನಕ್ಕಾಗಿ ನಮ್ಮಲ್ಲಿ ಪ್ರತಿಯೊಬ್ಬರು ಮಾಡತಕ್ಕ ಕೆಲಸ

"ಪ್ರತಿಯೊಬ್ಬ ಜಮೀನುದಾರನು ಮತ್ತು ರೈತನು ತಾನು ಬಳಸಿಕೊಳ್ಳುವ ಕಾಳಿನ ಪ್ರಮಾಣವನ್ನು ಕಡಿಮೆಮಾಡಿ ತನಗೆ ಕನಿಷ್ಟಮಾತ್ರಕ್ಕೆ ಬೇಕಾಗುವ ಕಾಳನ್ನು ಬಿಟ್ಟು ಉಳಿದ ಎಲ್ಲ ಕಾಳನ್ನು ಪೇಟೆಗೆ ಕಳಿಸಬಹುದು ಇಲ್ಲವೆ ಸರಕಾರದ ವಶಕ್ಕೆ ಕೊಡುವರೆಂದು ನಾನು ನಂಬಿದ್ದೇನೆ.

"ತಮ್ಮ ಕೈಯಿಂದ ಸಾಧ್ಯವಿದ್ದವರೆಲ್ಲ ಶಕ್ಯವಾದ ಸ್ಥಳಗಳಲ್ಲಿ ಆದಷ್ಟು ಹೆಚ್ಚು ಆಹಾರವನ್ನು ಬೆಳೆಯಬೇಕೆಂದು ನಾನು ಹಾರೈಸುತ್ತೇನೆ; ಕಾಯಿಪಲ್ಯೆ, ಬಟಾಟೆ, ಗೆಣಸು ಇವೆಲ್ಲಾ ಮಹತ್ವದವು.

"ದೈವವುಳ್ಳವರನ್ನು ನಾನು ಕಳಕಳಿಯಿಂದ ಇಷ್ಟೇ ಬೇಡಿಕೊಳ್ಳುತ್ತೇನೆ—ಅವರೆಲ್ಲ ನಿಜವಾಗಿಯೂ ಸ್ವಾರ್ಥ ತ್ಯಾಗವನ್ನು ಮಾಡಬೇಕು, ಹೆಚ್ಚಿನ ಲೋಲುಪತೆಯನ್ನು ಬಿಟ್ಟುಕೊಡಬೇಕು; ತಾವು ಬಳಸುತ್ತಿರುವ ರೊಟ್ಟಿ, ಹಿಟ್ಟು, ಹೋಳಿಗೆ, ಅನ್ನ, ಬಿಸ್ಕೀಟು ಇವುಗಳನ್ನೆಲ್ಲ ಸಾಧ್ಯವಾದ ಮಟ್ಟಿಗೆ ಕಡಿಮೆಮಾಡಬೇಕು. ಹನಿ ಹನಿ ಉಳಿತಾಯವಾದರೆ ಹಳ್ಳವಾಗುವುದು. ಬರಗಾಲದ ಪ್ರದೇಶದಲ್ಲಿರುವವನೂ ಪಟ್ಟಣಗಳಲ್ಲಿರುವ ಬಡವನೂ ಅದೇ ಪ್ರಕಾರದ ಸೀದಾ ಆಹಾರವನ್ನು ಸೇವಿಸಬೇಕಾಗುವುದು, ಆದರೆ ಶ್ರೀಮಂತರು ಮಾಂಸ, ಮೀನು, ಇತರ ಕಾಯಿಪಲ್ಯೆ, ಫಲಾಹಾರಗಳನ್ನೂ ಸೇವಿಸಿ ಜೀವಿಸಬಹುದು.

"ಈ ಬಿಕ್ಕಟ್ಟನ್ನು ನಾವೆಲ್ಲರೂ ಒಂದಾಗಿ ಎದುರಿಸೋಣ ಮತ್ತು ಪ್ರತಿಯೊಬ್ಬರು ಸಮನಾದ ಸ್ವಾರ್ಥತ್ಯಾಗವನ್ನು ಮಾಡೋಣ. ಇಷ್ಟೆಲ್ಲ ನಾವು ಕೈಕೊಂಡರೆ ೧೯೪೬ರ ವಿಷಮ ಪರಿಸ್ಥಿತಿಯನ್ನು ಯಶಸ್ವಿಯಾಗಿ ದಾಟುವೆವೆಂದು ನನಗೆ ವಿಶ್ವಾಸವಿದೆ"

ವ್ಹಾಯಿಸರಾಯರು ಶನಿವಾರ, ಫೆಬ್ರುವರಿ ೧೬, ೧೯೪೬ಕ್ಕೆ ಹೊಸದಿಲ್ಲಿಯ ಆಕಾಶವಾಣಿಯಲ್ಲಿ ಮಾಡಿದ ಭಾಷಣದಿಂದ

## ಆಹಾರದ ಕೊರತೆಯನ್ನು ಹೋಗಲಾಡಿಸಿರಿ

ಹಿಮ್ಮನಸ್ಸಿನಿಂದ ದುಡಿಯಿರಿ ಎಲ್ಲರೂ ಪಾಲುಗಾರರಾಗಿರಿ

ಹಿಂದುಸ್ಥಾನ ಸರಕಾರದ ಆಹಾರಖಾತೆ, ಹೊಸದಿಲ್ಲಿ, ಇವರ ಪ್ರಕಟನೆ




ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

# ಎಪ್ರಿಲ ೨೨ ರಿಂದ ೨೮ ರ ವರೆಗೆ

## ಮೇಷ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಉತ್ತಮ. ಹೆಂಡತಿಗೂಡ ವಿಶೇಷ ಮನೋರಂಜನ. ಆಪ್ತರಲ್ಲಿ ಕೆಲವರ ಉತ್ಕರ್ಷ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಬಹಳ ಉತ್ತಮ. ಆದರೆ ಪ್ರತಿಯೊಂದು ಸಂಗತಿ ಕಾರ್ಯಕಾರಿಯಾಗಬೇಕಾದರೆ ಜೀವಕ್ಕೆ ಸಾಕುಬೇಕಾಗಿ ಹೋಗುವ ಪ್ರಸಂಗ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಸಮಾನಸ್ಥಿತಿ. ಮಿತ್ರಸುಖ ಉತ್ತಮ. ಹೊಸ ವಸ್ತ್ರಾಲಂಕಾರಗಳ ಸಂಗ್ರಹ. ಮಾತುಲವರ್ಗದಲ್ಲಿ ಸುಖವೃದ್ಧಿಯ ಕೆಲ ಸಂಗತಿಗಳು. ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಅನುಕೂಲ. ಅಶ್ವಿನಿಯ ೪ ನೆ ಮತ್ತು ಭರಣಿಯ ಮೊದಲನೆಯ ಮೂರು ಚರಣಗಳಿಗೆ ಮಾತ್ರ ತೊಂದರೆಯಿಂದಲೆ ಯಶಸ್ಸು. ತಾ. ೨೨, ೨೩, ೨೬, ೨೭ ಅನುಕೂಲ.

## ವೃಷಭ

ಪ್ರಕೃತಿಯಲ್ಲಿ ಸ್ವಲ್ಪ ಕುರಕುರಿ. ಆದರೆ ಪ್ರಾಪಂಚಿಕ ಸುಖ ಉತ್ತಮ. ಮಕ್ಕಳಲ್ಲಿ ಬೆಳೆಯುತಿರುವ ಉತ್ಸಾಹ. ಸ್ಥಾವರದಲ್ಲಿ ಒಂದು ಅನುಕೂಲ ಸಂಗತಿಯಿದ್ದರೆ ಮತ್ತೊಂದು ಪ್ರತಿಕೂಲ ಸಂಗತಿ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮವೆ. ಆದರೆ ಖರ್ಚುವೂ ವಿಪರೀತ. ಪರಸ್ತ್ರೀ ಮೇಲೆ ಮನಸಿಟ್ಟ ಬಗ್ಗೆ ಹೆಂಗಸರಿಂದ ಇಲ್ಲವೆ ಮಿತ್ರರಿಂದ ಕಿವಿ ಹಿಂಡಿಸಿಕೊಳ್ಳುವದು, ವಾದದಲ್ಲಿ ಇಲ್ಲವೆ ಸ್ಪರ್ಧೆಯಲ್ಲಿ ಉಭಯಪಕ್ಷಗಳ ಸಮಾನ ಸ್ಥಿತಿ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ಕೃತ್ತಿಕೆಯ ೪ ನೆ ಮತ್ತು ರೋಹಿಣಿಯ ಮೊದಲನೆ ೩ ಚರಣಗಳಿಗೆ ಹೆಚ್ಚು ತೊಂದರೆ. ತಾ. ೨೬, ೨೭, ೨೮ ಅನುಕೂಲ.

## ಮಿಥುನ

ಪ್ರಕೃತಿ ಮತ್ತು ಸ್ತ್ರೀಸುಖ ಉತ್ತಮ. ಆದರೆ ಅದಕ್ಕೆ ಕೆಲ ಮಾನಸಿಕ ತೊಂದರೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಜೋರಿನಲ್ಲಿ ಇದರೆ ಕಿರುಕುಳ ಖರ್ಚವನ್ನು ಕೇವಲ ಮನೆಯ ಜನರ ಹೌಸಿಗಾಗಿ ವಿಪರೀತ ಮಾಡಬೇಕಾಗುವದು. ದೇವಧರ್ಮದ ಕೆಲ ಕೃತ್ಯಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳು ಚಮತ್ಕಾರಕವಾದ ಪೇಚು ಹಾಕುತ್ತಲೆ ನಡೆಯುವದು. ಆದರೆ ಕೊನೆಗೆ ಅನುಕೂಲತೆ ನಿಮ್ಮ ಕಡೆಗಿಯೆ. ಪ್ರವಾಸಾದಿ ಕೆಲಸ ಅನುಕೂಲ. ಮೃಗಾದ ೪ ನೆ ಮತ್ತು ಆರಿದ್ರಾದ ಮೊದಲನೆ ೩ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೨೨, ೨೬. ೨೭ ಅನುಕೂಲ.

## ಕರ್ಕ

ಪ್ರಕೃತಿ ಸಾಧಾರಣವೆ. ಏನೇ ಮಾತಾಡಲಿ ಹೇಗೇ ಕಾರ್ಯ ಮಾಡಲಿ ಹೆಂಡತಿಯ ರೋಷ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಆದರೆ ಖರ್ಚ ಅದಕ್ಕಿಂತ ಹೆಚ್ಚು. ವಾದದಲ್ಲಿ ಸ್ಪರ್ಧೆಯಲ್ಲಿ ಶತ್ರುಗಳ ಕುಮಕುಮಿಯಿಂದ ಮನಬಂದಂತೆ ಖರ್ಚ ಮಾಡುವದು ಮತ್ತು ಯಾರುಬೇಕಾದವರೊಡನೆ ಲಾಂಗೂಲಚಾಲನ ಮಾಡುವಿಕೆ ಆದರೆ ಕೊನೆಗೆ ಶತ್ರುಗಳೊಡನೆ ವಿಜಯ ಇಲ್ಲವೆ ಜೋರು. ಮಿತ್ರಪಕ್ಷದಲ್ಲಿ ವಿರೋಧ. ಕೊಡ ತಕೊಳ್ಳುವ ವ್ಯವಹಾರದಲ್ಲಿ ಮೋಸ ಸ್ವತಃದ್ದೆ ಆದರೆ ಆರೋಪ ಮಾತ್ರ ಎರಡನೆಯವರನ್ನು ಮೋಸಗೊಳಿಸಿದ್ದು. ಪ್ರವಾಸಾದಿ ಕೆಲಸ ಕಷ್ಟದಿಂದಲೆ ಮಧ್ಯಮ ಸಾಧಿಸುವವು. ಪುಷ್ಯದ ೪ ನೆ ಮತ್ತು ಆಶ್ಲೇಷಾದ ಮೊದಲನೆ ೩ ಚರಣಗಳಿಗೆ ಮಾತ್ರ ತೊಂದರೆ ಕಡಮೆ. ತಾ. ೨೪, ೨೫, ೨೮ ಅನುಕೂಲ.

## ಸಿಂಹ

ಪ್ರಕೃತಿ ನಿಮ್ಮದು ಅನುಕೂಲ. ಆದರೆ ಹೆಂಡತಿಯ ಪ್ರಕೃತಿಯಲ್ಲಿ ಮಾತ್ರ ಕಿರಕುಳ ಕಾಯಿಲೆ. ಉಭಯತರಲ್ಲಿ ಮತೈಕ್ಯ ಮತ್ತು ಎಲ್ಲಬಗೆಯಿಂದ ಪ್ರಾಪಂಚಿಕ ಸುಖ. ಉತ್ತಮ ಜನರ ಸಹವಾಸ. ವಿಶೇಷ ಕಾಲ್ಪನಿಕ ಕೆಲಸ ಕೃತ್ಯಮಾಡುವವರಿಂದ ಲೇಖೀ ಪ್ರಸಿದ್ಧಿ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ ಆದರೆ ಖರ್ಚ ಇಮ್ಮಡಿ ಅಲ್ಲದೆ ಜಾಯಿಗೆ ಜಾಯಿತಕ್ಕುವದು. ಪತ್ರವ್ಯವಹಾರ ಭಾನಗಡಿಯದು ಆದರೆ ಭೆಟ್ಟಿಯು ಕೆಲಸ ಮನಸ್ಸಿನಂತೆ, ಮಘಾದ ೪ ನೆ ಮತ್ತು ಪೂರ್ವಾದ ಮೊದಲನೆ ೩ ಚರಣಗಳಿಗೆ ಮಾತ್ರ ತೊಂದರೆ ಕಡಮೆ. ತಾ. ೨೪, ೨೫, ೨೮ ಅನುಕೂಲ.

## ಕನ್ಯಾ

ಪ್ರಕೃತಿ ಉತ್ತಮ ಸ್ತ್ರೀ ಸುಖ ಉತ್ತಮ. ಆದರೆ ಮಕ್ಕಳಲ್ಲಿ ಒಬ್ಬರಿಗೆ ಕ್ಲೇಶ ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಅಷ್ಟಕ್ಕಷ್ಟೆ. ಆದರೆ ಹೆಚ್ಚು ಲಾಭ ಆಗಿದೆಂಬ ಸುದ್ದಿ ಹೆಚ್ಚು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ ಮಿತ್ರಸುಖದಲ್ಲಿ ವಿರಸ ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಅನುಕೂಲ. ಉತ್ತರಾದ ೪ ನೆ ಹಸ್ತಾದ ಮೊದಲನೆ ೩ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೨೪, ೨೫, ೨೮ ಅನುಕೂಲ.

## ತುಲಾ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಪ್ರಿಯ ಜನರ ಸಹವಾಸ ಮತ್ತು ಭಾವೀ ಸುಖ ಸೌಕರ್ಯಗಳ ವಿಚಾರವಿನಿಮಯ ಅಹೋರಾತ್ರಿ ನಡೆದಿದೆ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಸಾಧಾರಣವೆ. ಆದರೆ ದ್ರವ್ಯ ಲಾಭ ತುಂಬ ಸತ್ಕೃತ್ಯದಲ್ಲಿ ಬಹಳ ಖರ್ಚ. ಮಿತ್ರಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಸಮಾನ ಸ್ಥಿತಿ. ಇಲ್ಲವೆ ಮನಸ್ಸಿನಂತೆ ಒಡಂಬಡಿಕೆ ಬಂಧುವರ್ಗದವರ ಪರಿವಾರದಲ್ಲಿ ಒಬ್ಬರಿಗೆ ಬಹಳ ಕ್ಲೇಶ ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಅನುಕೂಲ. ಚಿತ್ರಾದ ೪ ನೇ ಮತ್ತು ಸ್ವಾತಿಯ ಮೊದಲನೆ ೩ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು ತಾ. ೨೨—೨೩—೨೬—೨೭ ಅನುಕೂಲ.

## ವೃಶ್ಚಿಕ

ಪ್ರಕೃತಿ ಉತ್ತಮ. ಆದರೆ ಹೆಂಡತಿಗೆ ಕೆಲವೊಂದು ಸಂಗತಿಗಳಲ್ಲಿ ಮಾನಸಿಕ ತೊಂದರೆಯಾಗುವದರಿಂದ ಅವಳದು ನಿಮ್ಮ ಹೊರತು ಇತರರೊಡನೆ ದಿನಾಲು ವಿತುಷ್ಟ ಬೆಳೆಯುವ ಯೋಗ. ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಅನುಕೂಲ. ಆದರೆ ಸಂಗ್ರಹದಿಂದಲೆ ಖರ್ಚವಾಗುವಂತೆ ಕೆಲ ವ್ಯವಹಾರ ನಡೆವ ಭೀತಿ. ವಾದದಲ್ಲಿ ಇಲ್ಲವೆ ಸ್ಪರ್ಧೆಯಲ್ಲಿ ಬಹಳ ಹಿನ್ನಿಟ್ಟುವದು. ಪ್ರವಾಸ ತೊಂದರೆಯದು. ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ಉತ್ತಮ. ಅನುರಾಧೆಯ ೪ ನೆ ಮತ್ತು ಜೇಷ್ಠಾದ ಮೊದಲನೆ ೩ ಚರಣಗಳಿಗೆ ತೊಂದರೆಯಿಂದ ಯಶಸ್ಸು. ತಾ. ೨೨—೨೩ ಅನುಕೂಲ.

## ಧನು

ನಿಮ್ಮದು ಮತ್ತು ಹೆಂಡತಿಯದು ಪ್ರಕೃತಿ ಉತ್ತಮ. ಆದರೆ ಮಕ್ಕಳು ಮರಿಗಳಲ್ಲಿ ಒಬ್ಬರಿಗೆ ಬಹಳ ಕ್ಲೇಶ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಆದರೆ ಮನಸಿನ ವಿರುದ್ಧ ಕೆಲ ಸಂಗತಿಗಳನ್ನು ಮಾಡಬೇಕಾಗುವದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಸಾಮಾನ್ಯ ಅನುಕೂಲತೆ ಪ್ರವಾಸಾದಿ ಕೆಲಸ ಬಹಳ ಉತ್ತಮ. ಮೂಲಾದ ೪ ನೆ ಮತ್ತು ಪೂರ್ವಾಷಾಢಾದ ಮೊದಲನೆ ೩ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೨೨-೨೩ ೨೬—೨೭ ಅನುಕೂಲ.

## ಮಕರ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಸಾಧಾರಣವೆ, ಹೆಂಡತಿಯಿಂದ ಹಟವಾದಿತನದ ಕೆಲಸವಾಗುವದರಿಂದ ಮನೆಮನೆಗಳಲ್ಲಿ ಅಸಂತೋಷ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ವಾದದಲ್ಲಿ ಇಲ್ಲವೆ ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ಪ್ರವಾಸಾದಿ ಕೆಲಸ ಹಿತಕರ. ಉತ್ತರಾಷಾಢಾದ ೪ ನೆ ಮತ್ತು ಶ್ರವಣಾದ ಮೊದಲನೆ ೩ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು ತಾ. ೨೪—೨೫—೨೬—೨೭ ಅನುಕೂಲ.

## ಕುಂಭ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಉತ್ತಮ. ಆದರೆ ಆಪ್ತರಲ್ಲಿ ಕೆಲ ಜನರಗೂಡ ವಿರೋಧ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಉತ್ತಮ. ಆದರೆ ಖರ್ಚ ಸಹಿತ ವಿಪರೀತ. ಪ್ರತಿಯೊಂದು ಕೆಲಸದಲ್ಲಿ ಹುಚ್ಚುಚ್ಚಾರ ಆತ್ಮವಿಶ್ವಾಸ. ವಾದದಲ್ಲಿ ಇಲ್ಲವೆ ಸ್ಪರ್ಧೆಯಲ್ಲಿ ಬಹಳ ಅನುಕೂಲತೆ. ಪ್ರವಾಸಾದಿ ಕೆಲಸ ಸಾಧಾರಣ ಅನುಕೂಲ. ಧನಿಷ್ಠಾದ ೪ನೇ ಮತ್ತು ಶತತಾರಿಕೆಯ ಮೊದಲನೆ ೩ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೨೨, ೨೩, ೨೬, ೨೮ ಅನುಕೂಲ.

## ಮೀನ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಆದರೆ ಸ್ಥಾವರ ಸಂಗ್ರಹದಲ್ಲಿ ಸ್ವಲ್ಪ ಹೆಚ್ಚಳ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಮಿತ್ರರಲ್ಲಿ ಕ್ಲೇಶ ಇಲ್ಲವೆ ವಿರೋಧ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ. ಪ್ರವಾಸಾದಿ ಕೆಲಸ ಬಹಳ ಉತ್ತಮ. ಉತ್ತರಾಭಾದ್ರಪದದ ೪ನೇ ಮತ್ತು ರೇವತಿಯ ಮೊದಲಿನ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೨೨, ೨೩, ೨೪, ೨೫ ಅನುಕೂಲ.

ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ನೋಹರಿಯವರಿಂದ ಮುದ್ರಿತ ಪ್ರಕಟವಾಯಿತು.

## ವಿಚಿತ್ರಾದೇವಿ

( ಹಿಂದಿನ ಪುಟದಿಂದ )

ಮುಖ ಪುಟದ ಮೇಲೆ ವಿಚಿತ್ರಾದೇವಿಯ ಫೋಟೊ ಅಂಟಿಸಿದರಾಯಿತು. ಆ ಕಾದಂಬರಿಯ ಪ್ರತಿಗಳು ಬಿಸಿ ದೋಸೆಗಳಂತೆ ಸಾಲದೇ ಹೋಗುತ್ತವೆ. ಘುಕಟೆ ಅಲ್ಲ.

ಅವಳ ಹಸ್ತಾಕ್ಷರ ( autograph ) ಸಂದರ್ಶನಗಳ ಸಲುವಾಗಿ ಜನರು ಕ್ಯೂದಲ್ಲಿ ಅವಳ ಬಾಗಿಲವನ್ನು ಕಾಯುತ್ತಾರೆ.

ಗಾನ ದೋಸೆ ತಯಾರಿಕೆಯ ಕಂಪನಿಯವರು ಎಲ್ಲ ರಸ ರಾಗಗಳ ಮೇಲಿನ ಅವಳ ಪ್ರಭುತ್ವವನ್ನು ಸಾವಿರಾರು ಪವನುಗಳನ್ನು ಕೊಟ್ಟು ಸ್ವರಗ್ರಾಹಕ ತಟ್ಟೆಗಳಲ್ಲಿ ಹಿಡಿದಿಟ್ಟಿದ್ದಾರೆ.

ಚಲನಚಿತ್ರ ನಿರ್ಮಾಣಕರ ಕೂಡ ವೇತನ ಠರಾಯಿಸಿಕೊಂಡು ಅವರು ತೆಗೆಯುವ ಚಿತ್ರಗಳಲ್ಲಿ ಕೆಲಸ ಮಾಡುವ ಕರಾರುಪತ್ರಕ್ಕೆ ರುಜು ಹಾಕುತ್ತಾಳೆ. ಜಗತ್ತಿನ ಚಲನಚಿತ್ರ ನಕ್ಷತ್ರಗಳೆಲ್ಲ ಒಂದೇ ಮಸ್ಕತ್ತ ದಾಳಿಂಬದ ಬೀಜಗಳು ಪುಣ್ಯವನದ ತನ್ನ ವ್ಯವಸಾಯಿಭಗಿನಿಯರಂತೆ ಖಗೋಲಿಕ ( astronomical figure ) ಅಂಕಿಗಳಲ್ಲಿ ಪಗಾರ ತೆಗೆದುಕೊಳ್ಳದಿದ್ದರೂ ಸುಪರ ಟ್ಯಾಕ್ಸ ಬೀಳುವಷ್ಟು ಪಗಾರ ಅವಳು ತೆಗೆಯುತ್ತಾಳೆ.

ವಿಚಿತ್ರಾದೇವಿಯ ವೈವಾಹಿಕ ಜೀವನವೊಂದು ನಾಟಕವೇ ಆಗಿದೆ. ಈಗ ಮದುವೆಯ ಮೂರು ಕಟ್ಟಿಯಲ್ಲಿ ಒಬ್ಬ ಮಗಳಿಂದ ಒಬ್ಬ ಅಳಿಯನನ್ನು ಪಡೆಯುವದು ದುಸ್ತರ ಆಗಿದೆ. ಅವಳೊಬ್ಬಳಿಂದಲೇ ಅಸಂಖ್ಯ ಅಳಿಯಂದಿರನ್ನು ಕಂಡ ಅವಳ ತಂದೆ ತಾಯಿಗಳು ಭಾಗ್ಯಶಾಲಿಗಳಲ್ಲವೇ ಘೋರ ಇಗಲಿ ಮುಂದೆ ಮದುವೆಯ ಬಂಗಾರದ ಬೇಡಿಗಳನ್ನು ಧರಿಸಿ ಕಂಕಣಮುಚ್ಚಣಿಕೆ ಆಟ ವಾಡಿದರೂ ಹೆಸರು ಬದಲಾಯಿಸದೆ ಉಳಿದ ಅಖಂಡ ಕನ್ಯೆ ಮಿಸ್ ವಿಚಿತ್ರಾದೇವಿ ಎಂದೇ ಚಲನಚಿತ್ರ ಜಗತ್ತಿನಲ್ಲಿ ಗುರ್ತಿಸಲ್ಪಡುತ್ತಾಳೆ.

ಕುಲೀನ ಸ್ತ್ರೀಯರು ರಂಗಸ್ಥಳ ಚಲನಚಿತ್ರಗಳಲ್ಲಿ ಭಾಗವಹಿಸಬಾರದೆಂಬ ಸಮಾಜದ ಕಟ್ಟಳೆವು ದುರಸ್ತಾಗಿದೆ. ಅಲ್ಲ ರದ್ದಾಗಿದೆ. ನೃತ್ಯ ಸಾಹಿತ್ಯ ಸಂಗೀತ ಮುಂತಾದ ಕಲೆಗಳ ಸಂಗಮವಾದ ಚಲನಚಿತ್ರ ವ್ಯವಸಾಯವು ಯಾವ ರೀತಿಯಿಂದಲೂ ಹೀನವಲ್ಲ. ಅದರಲ್ಲಿ ಭಾಗ ತಗೆದುಕೊಳ್ಳುವದೇ ಪರಮಪಾವನ. ಅದ್ದರಿಂದ ವಿಚಿತ್ರಾದೇವಿಯ ಸಭ್ಯತೆಗೆ ಸಂಭಾವ್ಯತೆಗೆ ಏನೂ ಬಾಧೆ ಬರಲಾರದು. ಇಷ್ಟೇ ಅಲ್ಲದೆ ಸಮಾಜದಲ್ಲಿ ಅವಳಿಗೊಂದು ದರ್ಜೆ ಪ್ರಾಪ್ತವಾಗಿದೆ.

ಅವಳ ಚಟುವಟಿಕೆಯಲ್ಲಿ ಆಸಕ್ತರಾದ ಅಪ್ಸರೆಯರು ಸಹ, ಕಂತಿಖಿಂದ ಪ್ರಸಿದ್ಧಿಸಲ್ಪಡುವ ಅವಳ ವೃತ್ತಾಂತವನ್ನು—ವೃತ್ತದ ಅಂತವಲ್ಲ—ಓದುವ ಉತ್ಸುಕತೆಯಿಂದ ಚಲನಚಿತ್ರ ಸಾಹಿತ್ಯ ಮಣಿಯ ಚಂದಾದಾರರಾಗಿರುತ್ತಾರೆ. ಆಟಂ ಶಕ್ತಿಯಿಂದ ಪ್ರತಿಗಳನ್ನು ಸುರಲೋಕದ ಚಂದಾದಾರರಿಗೆ ಮುಟ್ಟಿಸುವದು ಅಂಚೆ ಖಾತೆಯವರ ಕೆಲಸ. ಯುದ್ಧ ಮುಗಿಯಿತು ಅಂದ ಮೇಲೆ ಮಹಾಮಹಾ ಶಾಸ್ತ್ರೀಯ ಶೋಧದ ಉಪಯೋಗವನ್ನು ಶಾಂತಿ ಕಾಲದಲ್ಲಿ ಚಿಲ್ಲರೆ ಕೆಲಸಕ್ಕೆ ಅಂಚೆ ಖಾತೆಯವರು ಅಣಿ ಮಾಡಲಿ.

## ಸುಭಾಸರು ಸತ್ತಿರುವದು ನಿಜ

ಶ್ರೀ. ಸುಭಾಸಚಂದ್ರ ಬೋಸರು ಜೀವಂತವಿರುವರು ಎಂಬ ಭಾವನೆಯನ್ನು ಹಿಂದೀಯರು ತೊಡೆದು ಹಾಕಬೇಕು. ಅವರು ನಿಜಕ್ಕೂ ಸತ್ತಿರುವರು ಎಂದು ಶ್ರೀ. ಅಮರ ಲಾಹೀರಿಯವರು ಪ್ರಕಟನೆ ಕೊಟ್ಟಿರುವರು.

ಅವರು ಹೇಳುವದೇನಂದರೆ "ಶ್ರೀ. ಸುಭಾಸಚಂದ್ರ ಬೋಸರ ಶವದ ದಹನ ಫಾರ್ಮೋಸಾ ದ್ವೀಪದ ರಾಜಧಾನಿಯಾದ ತಾಯಹೊಕೊ ಎಂಬಲ್ಲಿ ನಡೆಯಿತು. ಅವರ ಬೂದಿಯನ್ನು ಟೋಕಿಯೊಕ್ಕೆ ಒಯ್ದಿರಿಸಿಕೊಂಡು ಅಲ್ಲಿಯ ಹಿಂದೀಯರು ಅಂತ್ಯಸಂಸ್ಕಾರ ಕೈಕೊಂಡರು."

## ೧೦೦೦ ರೂಪಾಯಿಗಳ ಬಕ್ಷೀಸು

ಈ ಕೆಳಗಿನ ಔಷಧಗಳಲ್ಲಿ ಗುಣವಿಲ್ಲೆಂದು ಸಿದ್ಧಮಾಡಿ ಕೊಟ್ಟಲ್ಲಿ ೧,೦೦೦ ರೂ. ಇನಾಮು

### ಶ್ರೀ ಬಸವರಾಜ ಮೆಡಿಕಲ್ ಫಾರ್ಮಸಿ

# ಪ್ರಮೇಹ ಗನೋರಿಯಾ ನಾಶಕ ಗುಟಿ

ಪ್ರಮೇಹ ಮೈಯಲ್ಲಿ ಭೇದಿಸಿದರೆ ತಮ್ಮ ಮತ್ತು ತಮ್ಮ ಭಾವೀ ಪೀಳಿಗೆಗೆ ನಾಶ ಮಾಡದೆ ಬಿಡಲಾರದು. ಇಂಥ ಮಹಾ ಹಾನಿಕಾರಕ ಎಲ್ಲ ೨೦ ಪ್ರಕಾರದ ಎಂತಹ ಹಳೇ ಪ್ರಮೇಹವಿದ್ದರೂ ಕೂಡ ಈ ಔಷಧದ ಸೇವನೆಯಿಂದ ತ್ವರಿತ ಗುಣವಾಗುತ್ತದೆ. ಮೂತ್ರ ಮಾರ್ಗ ಸ್ವಚ್ಛವಾಗಿ ಮೂತ್ರದ ಕಾಲಕ್ಕೆ ಉಂಟಾಗುವ ವೇದನೆ ಮತ್ತು ಉರುಪು ಇಲ್ಲದಂತಾಗುತ್ತದೆ. ಕೀವು ಮತ್ತು ಪ್ರಮೇಹ ಹೋಗುವದು ಬಂದಾಗುತ್ತದೆ. ಮೂತ್ರಾಶಯದ ಎಲ್ಲ ವಿಕಾರಗಳನ್ನು ನಷ್ಟಪಡಿಸಿ ಶರೀರದಲ್ಲಿಯ ಅಶುದ್ಧ ತತ್ವಗಳನ್ನು ಮೂತ್ರಮಾರ್ಗದಿಂದ ಹೊರದೂಡಿ ಪ್ರಮೇಹ ಮತ್ತು ಅದರಿಂದ ಉದ್ಭವಿಸಿದ ಎಲ್ಲ ವ್ಯಾಧಿಗಳನ್ನು ಸಮೂಲ ನಷ್ಟ ಮಾಡಿ ಕಾಯಂ ಗುಣಪಡಿಸುತ್ತದೆ. ಅನುಪಾನ ಪತ್ರಿಕೆ ಔಷಧದ ಕೂಡ ಪಥ್ಯ ಏನೂ ಇಲ್ಲ. ಬೆಲೆ ರೂ. ೫-೦-೦ ಅಂಚೆ ವೆಚ್ಚ ಬೇರೆ.

## ಕಿಂ ] ವನಿತಾ ಕಲ್ಯಾಣ ಪ್ರದರಾಂತಕ [ ೫-೮-೦

ಶ್ವೇತ:-ರಕ್ತ ಪ್ರದರ, ಮುಟ್ಟು ಹೆಚ್ಚು ಕಡಿಮೆ ಅನಿಯಮಿತ ಮುಟ್ಟಾಗುವಿಕೆ, ಮುಟ್ಟಾಗುವ ಕಾಲಕ್ಕೆ ರಕ್ತಸ್ರಾವ ಆಗದೆ ಗುಲಾಬಿ, ಹಳದಿ, ಕೆಂಪು ಮುಂತಾದ ಅಶುದ್ಧ ದುರ್ಗಂಧಯುಕ್ತ ಮುಟ್ಟು ನೀರಿನಂತೆ ಹೋಗುವಿಕೆ ಇವೆಲ್ಲವುಗಳನ್ನು ಖಂಡಿತವಾಗಿ ನಷ್ಟಪಡಿಸುತ್ತದೆ. ಇದರ ಸೇವನೆಯಿಂದ ಪ್ರದರ ಮತ್ತು ಮುಟ್ಟುದೋಷ ಇವುಗಳಿಂದ ಕಿಪ್ಪಟ್ಟ ಗರ್ಭಾಶಯ ಇಲ್ಲವೆ ಕುಸುಮದಲ್ಲಿ ಆಗುವ ವೇದನೆ, ನಡ, ತಲೆ, ತೊಡೆ ಮತ್ತು ಸಂದು ಇವುಗಳ ನೋವು, ಸಂಭೋಗ ಸಮಯದಲ್ಲಿ ಕಷ್ಟ, ಗರ್ಭಧಾರಣೆ ಆಗದಿರುವಿಕೆ, ಆದರೂ ಗರ್ಭಪಾತ ಮುಂತಾದ ಎಲ್ಲ ವಿಕಾರ ಮತ್ತು ಅದರಿಂದ ಉತ್ಪನ್ನವಾದ ಎಲ್ಲ ರೋಗಗಳನ್ನು ನಾಶ ಮಾಡಿ ಶರೀರದಲ್ಲಿ ಬಲ ಪುಷ್ಟಿ ಮತ್ತು ಗರ್ಭಾಶಯದಲ್ಲಿ ಗರ್ಭಧಾರಣೆಯ ಶಕ್ತಿಯುಂಟಾಗುತ್ತದೆ. ಈ ಔಷಧ ಸೇವನೆಯಿಂದ ಸಾವಿರಾರು ಸ್ತ್ರೀ-ಪುರುಷರು ಗುಣಹೊಂದಿದ್ದಾರೆ. ಪಥ್ಯ ಏನೂ ಇಲ್ಲ. ಅಂಚೆ ವೆಚ್ಚ ಬೇರೆ.

ವಿಳಾಸ—ವೈದ್ಯರಾಜ ವಿ. ಬಿ. ಶಿದನಾಳ

೧೩೮೫ (ಕೆ. ವ್ಹಿ.) ಬಸವನಗಲ್ಲಿ, ಬೆಳಗಾವಿ.